ಪ್ರಜಾವಾಣಿ ಗುರುವಾರ • ಡಿಸೆಂಬರ್ 26, 2019

# 'ಗಾಂಧಿ ತತ್ವಗಳು ವಿಕಾಸವಾದಕ್ಕೆ ವಿರುದ್ಧ'



ಬೆಂಗಳೂರು: 'ಗಾಂಧೀಜಿ ಹಾಗೂ ಬುದ್ಧ ಬೋಧಿಸಿದ ತತ್ವಗಳಲ್ಲಿ ಸಾಕಷ್ಟು ಸಾಮ್ಯತೆಗಳಿವೆ. ಆದರೆ, ಅವುಗಳು ವಿಕಾಸವಾದಕ್ಕೆ ವಿರುದ್ಧವಾಗಿವೆ' ಎಂದು ಲೇಖಕ ಡಾ.ಕೆ.ಎನ್.ಗಣೇಶಯ್ಯ ಅಭಿಮತ ವ್ಯಕ್ತಪಡಿಸಿದರು.

ಗಾಂಧೀ ಶಾಂತಿ ಪ್ರತಿಷ್ಠಾನ ನಗರದಲ್ಲಿ ಮಂಗಳವಾರ ಆಯೋಜಿಸಿದ್ದ 'ಬುದ್ಧ-ಗಾಂಧಿ; ವಿಕಾಸ ವಿಜ್ಞಾನ' ದತ್ತಿ ಉಪನ್ಯಾಸದಲ್ಲಿ ಮಾತನಾಡಿದರು.

'ಅಹಿಂಸೆ, ಕರುಣೆ, ದಯೆ, ನಿಸ್ವಾರ್ಥ ಜೀವನ, ಸರಳತೆ ಸೇರಿದಂತೆ ವಿವಿಧ ತತ್ವಗಳಲ್ಲಿ ವೈರುಧ್ಯವನ್ನು ಕಾಣಬಹುದಾಗಿದೆ. ಅಹಿಂಸೆಯ ಬಗ್ಗೆ ಗಾಂಧೀಜಿ ಎಲ್ಲೆಡೆ ಸಾರಿದರೂ, ದೇಶದ ರಕ್ಷಣೆ ವಿಷಯ ಬಂದಾಗ ಸೈನಿಕರಿಗೆ ವೈರಿಗಳನ್ನು ಕೊಲ್ಲಬೇಡಿ ಎಂದು ಹೇಳಲು ಸಾಧ್ಯವಿಲ್ಲ. ವಿಕಾಸವಾದದಲ್ಲಿ ಇರುವೆಯಿಂದ ಮನುಷ್ಯನವರೆಗೂ ಎಲ್ಲ ಜೀವಿಗಳು ಗಾಂಧೀಜಿ ಹಾಗೂ ಬುದ್ಧನ ತತ್ವಗಳಿಗೆ ವಿರುದ್ಧವಾಗಿಯೇ ನಡೆದುಕೊಂಡಿವೆ. ವಿಕಾಸವಾದವು ಪ್ರತಿಯೊಂದು ಜೀವಿಯನ್ನೂ ಸ್ವಾರ್ಥಿಯಾಗಿ ರೂಪಿಸಿದೆ' ಎಂದು ಹೇಳಿದರು.

'ಒಂದು ಪ್ರಭೇದ ಮತ್ತೊಂದು ಪ್ರಭೇದವನ್ನು ಹಿಂಸಿಸುವುದು ವಿಕಾಸವಾದದಲ್ಲಿಯೇ ಇದೆ. ಮನುಷ್ಯನೂ ವಿಕಾಸವಾದದ ಭಾಗವಾಗಿರುವ ಹಿನ್ನೆಲೆಯಲ್ಲಿ ಅವನಿಂದ ಹಿಂಸೆಯನ್ನು ತಡೆಯಲು ಸಾಧ್ಯವಿಲ್ಲ. ಜೇನುನೊಣ ತನ್ನ ಗೂಡಿನ ರಕ್ಷಣೆಗಾಗಿ ತನ್ನ ಜೀವವನ್ನೇ ಪಣಕ್ಕಿಟ್ಟು ಹೋರಾಡಿ, ಸಾಯುತ್ತದೆ. ಇದು ತ್ಯಾಗ ಎನಿಸಿದರೂ ತನ್ನ ಧಾತುಗಳನ್ನು ಉಳಿಸಿಕೊಳ್ಳುವ ಸ್ವಾರ್ಥವನ್ನು ಹುಳುಗಳು ಹೊಂದಿವೆ. ಮನುಷ್ಯ ಕೂಡ ಅದೇ ರೀತಿ' ಎಂದರು.

ನಂ. 1 ಕನ್ನಡ ದಿನಪತ್ರಿಕೆ

VIJAYAVANI BENGALURU
ಗುರುವಾರ 26 ಡಿಸೆಂಬರ್ 2019
26 DECEMBER 2019

# ಗಾಂಧಿ-ಬುದ್ಧ ತತ್ತ್ವಗಳು ವಿಕಾಸ ವಾದಕ್ಕೆ ವೈರುಧ್ಯ



ವಿಜಯವಾಣಿ ಚಿತ್ರ

ಉಪನ್ಯಾಸ ಕಾರ್ಯಕ್ರಮದಲ್ಲಿ ವಿಜ್ಞಾನಿ ಕೆ.ಎನ್. ಗಣೇಶಯ್ಯ, ಡಾ. ವೂಡೇ ಪಿ. ಕೃಷ್ಣ, ಜೀರಿಗೆ ಲೋಕೇಶ್, ಇಂದಿರಾ ಕೃಷ್ಣ, ಡಾ. ಎಸ್. ರಾಮಲಿಂಗೇಶ್ವರ ಮತ್ತಿತರರು ಉಪಸ್ಥಿತರಿದ್ದರು.

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಅಹಿಂಸೆ ಮತ್ತು ದುರಾಸೆ ಬಿಡಬೇಕೆಂಬ ಗಾಂಧಿ-ಬುದ್ಧ ತತ್ತ್ವಗಳು ವಿಕಾಸವಾದಕ್ಕೆ ವೈರುಧ್ಯ ಎಂದು ವಿಜ್ಞಾನಿ ಡಾ. ಕೆ.ಎನ್. ಗಣೇಶಯ್ಯ ಹೇಳಿದ್ದಾರೆ.

**ವಿಜ್ಞಾನಿ ಡಾ. ಕೆ.ಎನ್. ಗಣೇಶಯ್ಯ ಅಭಿಮತ**

ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಗಾಂಧಿ ಭವನದಲ್ಲಿ ಆಯೋಜಿಸಿದ್ದ 'ಬ್ರಹ್ಮ ಸಮಾಜದ ಮುಖಂಡರು ಹಾಗೂ ಗಾಂಧಿವಾದಿ ಡಬ್ಲ್ಯೂ.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ' ಕಾರ್ಯಕ್ರಮದಲ್ಲಿ ಮಾತನಾಡಿದರು. ಗಡಿಯಲ್ಲಿ ಸೈನಿಕರು ಹಿಂಸೆ ಮಾಡದೆ ದೇಶ ರಕ್ಷಿಸಲು ಸಾಧ್ಯ ವಿಲ್ಲ. ಹಾಗಾಗಿ ಇದು ಗಾಂಧಿ-ಬುದ್ಧನ ತತ್ತ್ವಗಳಿಗೆ ವಿರುದ್ಧ ಎಂದರು.

ವಿಕಾಸವಾದದಲ್ಲಿ ಒಳಿತು, ಕೆಡಕುಗಳೆರಡೂ ಇದ್ದು, ನೋಡುವವರ ನೋಟ ಭಿನ್ನವಾಗಿರುತ್ತದೆ. ವಿಕಾಸವಾದದ ಒಳನೋಟದಲ್ಲಿ ಸ್ವಾರ್ಥ ಕಾಣುತ್ತದೆ ಎಂದು ವಿಶ್ಲೇಷಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೀರಿಗೆ ಲೋಕೇಶ್, ಕಾರ್ಯದರ್ಶಿ ಇಂದಿರಾ ಕೃಷ್ಣ, ಗಾಂಧಿ ಪ್ರತಿಷ್ಠಾನದ ಕಾರ್ಯದರ್ಶಿ ಡಾ. ಎಸ್. ರಾಮಲಿಂಗೇಶ್ವರ ಮತ್ತಿತರರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ
25 | ಡಿಸೆಂಬರ್ | 2019 | ಬುಧವಾರ
ಸತ್ಯಕ್ಕೊಂದೇ ಮಾರ್ಗ-ಸುಳ್ಳಿಗೆ ಹಲವಾರು



ಗಾಂಧೀಭವನದಲ್ಲಿ ಗಾಂಧೀ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಸಹಯೋಗದೊಂದಿಗೆ ಆಯೋಜಿಸಿದ್ದ ಗಾಂಧೀವಾದಿ ಡಬ್ಲ್ಯೂ.ಹೆಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಡಬ್ಲ್ಯೂ.ಹೆಚ್. ಹನುಮಂತಪ್ಪ ಮತ್ತು ಗಾಂಧಿ ಅವರ ಪುತ್ಥಳಿಗೆ ಪುಷ್ಪನಮನ ಸಲ್ಲಿಸಲಾಯಿತು. ಲೇಖಕ ಡಾ.ಕೆ.ಎನ್. ಗಣೇಶಯ್ಯ, ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೀರಿಗೆ ಲೋಕೇಶ್, ಗೌ. ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಡಬ್ಲ್ಯೂ.ಹೆಚ್. ದೇವಕುಮಾರ್ ಮತ್ತು ಕಾರ್ಯದರ್ಶಿ ಸಿಸಿರಾ ಉಪಸ್ಥಿತರಿದ್ದರು.

ಹೊಸ ದಿಗಂತ
ಬುಧವಾರ
25 ಡಿಸೆಂಬರ್ 2019

## ವಿಜ್ಞಾನಿ ಡಾ.ಕೆ.ಎನ್.ಗಣೇಶಯ್ಯ ಬಣ್ಣನೆ

# ವಿಕಾಸವಾದದ ದುರ್ಗುಣ ಗೆದ್ದಿದ್ದು ಗಾಂಧಿ

ಬೆಂಗಳೂರು: ಮನುಷ್ಯ ಸಹಜವಾದ ವಿಕಾಸವಾದ ದುರ್ಗುಣಗಳನ್ನು ಮಹಾತ್ಮ ಗಾಂಧಿ ಮತ್ತು ಗೌತಮಬುದ್ಧ ಗೆದ್ದು ಸಾಧಿಸಿದರು ಎಂದು ವಿಜ್ಞಾನಿ ಡಾ.ಕೆ. ಎನ್.ಗಣೇಶಯ್ಯ ತಿಳಿಸಿದರು.

ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಜಂಟಿಯಾಗಿ ಗಾಂಧಿ ಭವನದಲ್ಲಿ ಆಯೋಜಿಸಿದ್ದ ಗಾಂಧಿವಾದಿ ಡಬ್ಲ್ಯೂ. ಎಚ್. ಹನುಮಂತಪ್ಪ ಸ್ಮರಣಾರ್ಥ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಬುದ್ಧ-ಗಾಂಧಿ ವಿಕಾಸ ವಿಜ್ಞಾನ ಕುರಿತು ಮಾತನಾಡಿದರು.

ಮನುಷ್ಯ ವಿಕಾಸ ಹೊಂದುತ್ತಾ ಹೋದಂತೆ ಆತನಲ್ಲಿ ವಿಕಾಸವಾದದ ಪರಿಣಾಮವಾಗಿ ಸ್ವಾರ್ಥ, ಹಿಂಸೆ, ದುರಾಸೆ, ತೋರಿಕೆ ಮತ್ತಿತರ ದುರ್ಗುಣಗಳು ಬೆಳೆದವು. ಆದರೆ ಗಾಂಧಿ ಮತ್ತು ಬುದ್ಧ ಈ ವಿಕಾಸವಾದದ ದುರ್ಗುಣ ಗೆದ್ದಿದ್ದರು. ಮೆಟ್ಟಿನಿಂತು ತಾವು ಪ್ರತಿಪಾದಿಸಿದ ತತ್ವಗಳಂತೆ ಬದುಕಿದ್ದಾರೆ. ಆದರೆ ಪ್ರಾಕೃತಿಕ ಜೀವನದಲ್ಲಿ ಬೆಳೆದ ಮನುಷ್ಯನಿಗೆ ಮಹನೀಯರ ತತ್ವಗಳನ್ನು ಅಳವಡಿಸಿಕೊಳ್ಳಲು ಅಸಾಧ್ಯವಾಗುತ್ತದೆ ಎಂದು ಹೇಳಿದರು.



ಅನೇಕ ಜೀವಿಗಳ ವಿಕಾಸದಿಂದ ಮಂಗನಿಂದ ಮಾನವ. ಮಂಗನ ಹಿಂದೆಯೂ, ಅನೇಕ ಜೀವಿಗಳು ವಿಕಾಸ ಹೊಂದಿವೆ. ಆ ಎಲ್ಲ ಜೀವಿಗಳಲ್ಲಿದ್ದ ಕುಟುಂಬದ ರಕ್ಷಣೆ, ಹಸಿವು ನೀಗಿಸಲು ತೋರುವ ಹಿಂಸೆ ಮುಂತಾದ ಎಲ್ಲ ಸ್ವಾರ್ಥದ ಗುಣಗಳು ವಿಕಾಸವಾದದ ಪರಿಣಾಮವಾಗಿ ಮನುಷ್ಯನಿಗೆ ಬಂದಿವೆ. ನಾವೆಲ್ಲರೂ ಈ ಗುಣಗಳಿಂದ ಬದುಕುತ್ತಿವೆ. ಆದ್ದರಿಂದಲೇ ಗಾಂಧಿ ತತ್ವಗಳು ವಿಕಾಸವಾದಕ್ಕೆ ವೈರುದ್ಧವಾಗಿ ಕಾಣುತ್ತವೆ ಎಂದು ಅವರು ತಿಳಿಸಿದರು.

ಸ್ವಾರ್ಥ, ಅಹಿಂಸೆ, ದುರಾಸೆ, ಸರಳ ಜೀವನ, ದಯೆ, ಕರುಣೆ ಮುಂತಾದವುಗಳನ್ನು ಪ್ರತಿಪಾದಿಸುವ ಗಾಂಧಿಯಲ್ಲೂ ಸ್ವಾರ್ಥವಿತ್ತು. ಅವರು ಸ್ವಾತಂತ್ರ್ಯಕ್ಕಾಗಿ ಹೋರಾಡುವಾಗ ನನ್ನ ದೇಶ, ಗಡಿ, ದೇಶದ ಜನರ ರಕ್ಷಣೆ ಎಂಬ ಸ್ವಾರ್ಥವಿದೆ ಎಂದು ತಿಳಿಸಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್, ಕಾರ್ಯದರ್ಶಿ ಎಸ್. ರಾಮಲಿಂಗೇಶ್ವರ, ದೇವಕುಮಾರ್ ಇದ್ದರು.

ಕರ್ನಾಟಕ

ಬುಧವಾರ, 25 ಡಿಸೆಂಬರ್ 2019

# ಗಾಂಧಿ, ಬುದ್ಧನ ತತ್ತ್ವಗಳು ವಿಕಾಸವಾದಕ್ಕೆ ವಿರುದ್ಧ

▪ ವಿಕ ಸುದ್ದಿಲೋಕ ಬೆಂಗಳೂರು

ಗಾಂಧಿ, ಬುದ್ಧನ ತತ್ತ್ವಗಳು ವಿಕಾಸವಾದಕ್ಕೆ ವಿರುದ್ಧವಾಗಿವೆ ಎಂದು ವಿಜ್ಞಾನಿ ಡಾ.ಕೆ.ಎನ್.ಗಣೇಶಯ್ಯ ಹೇಳಿದರು.

**ವಿಜ್ಞಾನಿ ಡಾ.ಕೆ.ಎನ್. ಗಣೇಶಯ್ಯ ಅಭಿಮತ**

ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಗಾಂಧಿ ಭವನದಲ್ಲಿ ಮಂಗಳವಾರ ಆಯೋಜಿಸಿದ್ದ ಬ್ರಹ್ಮ ಸಮಾಜದ ಮುಖಂಡರು ಹಾಗೂ ಗಾಂಧಿವಾದಿ ಡಬ್ಲ್ಯು.ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

"ಅಹಿಂಸೆ ಮತ್ತು ದುರಾಸೆಯನ್ನು ಬಿಡಬೇಕು ಎಂಬುದು ಗಾಂಧಿ ಮತ್ತು ಬುದ್ಧನ ತತ್ತ್ವಗಳಾಗಿದ್ದವು. ಆದರೆ ಗಡಿಯಲ್ಲಿ ಸೈನಿಕರು ಹಿಂಸೆ ಮಾಡದೆ ದೇಶದ ರಕ್ಷಣೆ ಸಾಧ್ಯವಿಲ್ಲ. ಒಂದು ಪ್ರಭೇದವು ಮತ್ತೊಂದು ಪ್ರಭೇದವನ್ನು ಆಹಾರವಾಗಿ ಸ್ವೀಕರಿಸದೆ ಬದುಕಲು ಸಾಧ್ಯವಿಲ್ಲ. ಹೀಗಾಗಿ, ಗಾಂಧಿ ಮತ್ತು ಬುದ್ಧನ ತತ್ತ್ವಗಳು ವಿಕಾಸವಾದಕ್ಕೆ ವಿರುದ್ಧವಾಗಿವೆ," ಎಂದರು.

"ವಿಕಾಸವಾದದಲ್ಲಿ ಒಳ್ಳೆಯದು ಮತ್ತು ಕೆಟ್ಟದ್ದು ಎರಡೂ ಅಡಗಿದೆ. ಆದರೆ, ಅದನ್ನು ನೋಡುವವರ ನೋಟದಲ್ಲಿ ಭಿನ್ನತೆಯಿರುತ್ತದೆ. ವಿಕಾಸವಾದದ ಒಳನೋಟ ನೋಡಿದರೆ ಅದರಲ್ಲಿ ಸ್ವಾರ್ಥ ಕಾಣುತ್ತದೆ. ಆದರೆ ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ನೋಡಿದರೆ ಸೋಲು, ಗೆಲುವಿನ ಪ್ರಶ್ನೆಯಾಗಿ ಕಾಣಿಸುತ್ತದೆ," ಎಂದು ವಿಶ್ಲೇಷಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, "ಮನುಷ್ಯರಿಗೆ ಸರಿ, ತಪ್ಪುಗಳ ಬಗ್ಗೆ ಆಲೋಚಿಸುವ ಶಕ್ತಿಯಿದೆ. ಹೀಗಾಗಿ, ಗಾಂಧೀಜಿಯನ್ನು ಓದಿ ಅರ್ಥೈಸಿಕೊಳ್ಳಬೇಕು. ಬಳಿಕ ಪ್ರಶ್ನಿಸಿ, ವಿಮರ್ಶಿಸಬೇಕು. ಪ್ರತಿಯೊಬ್ಬರೂ ಅಹಿಂಸೆ, ದುರಾಸೆ, ಸ್ವಾರ್ಥದಿಂದ ದೂರವಿದ್ದು ಸ್ವಯಂ ನಿಗ್ರಹ ಮಾಡಿಕೊಳ್ಳಬೇಕು," ಎಂದು ಸಲಹೆ ನೀಡಿದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೀರಿಗೆ ಲೋಕೇಶ್, ಕರ್ನಾಟಕ ಗಾಂಧಿ ಸ್ಮಾರಕ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಗಾಂಧಿ ಪ್ರತಿಷ್ಠಾನದ ಕಾರ್ಯದರ್ಶಿ ಡಾ. ಎಸ್.ರಾಮಲಿಂಗೇಶ್ವರ ಉಪಸ್ಥಿತರಿದ್ದರು.



ಕಾರ್ಯಕ್ರಮದಲ್ಲಿ ವಿಜ್ಞಾನಿ ಡಾ.ಕೆ.ಎನ್. ಗಣೇಶಯ್ಯ ಅವರನ್ನು ಸನ್ಮಾನಿಸಲಾಯಿತು.




ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಜಂಟಿಯಾಗಿ ಹಮ್ಮಿಕೊಂಡಿದ್ದ ಗಾಂಧಿವಾದಿ ಡಬ್ಲ್ಯೂ.ಹೆಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ವಿಜ್ಞಾನಿ ಡಾ.ಕೆ.ಎಸ್.ಗಣೇಶಯ್ಯ ಅವರನ್ನು ಡಾ.ವೂಡೆ ಪಿ.ಕೃಷ್ಣ ಸನ್ಮಾನಿಸಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಜೇರಿಗೆ ಲೋಕೇಶ್, ಕಾರ್ಯದರ್ಶಿ ಡಾ.ಎಸ್. ರಾಮಲಿಂಗೇಶ್ವರ, ಇಂದಿರಾ ಕೃಷ್ಣಪ್ಪ, ಡಬ್ಲ್ಯೂ.ಹೆಚ್.ದೇವಕುಮಾರ್ ಮತ್ತಿತರರು ಈ ಸಂದರ್ಭದಲ್ಲಿದ್ದರು.

# ತ್ಯಾಗದಲ್ಲಿ ಮಹಿಳೆಯನ್ನು ಮೀರಿಸುವವರಿಲ್ಲ

## ☐ ಹೋರಾಟಗಾರ್ತಿ ಚೆನ್ನಮ್ಮ ಗಾಂಧೀಜಿ–ವಿನೋಬಾ ಅವರ ಚಿಂತನೆಯಲ್ಲಿ ಬೆಳೆದವರು: ಕೃಷ್ಣ

ಹೊಸಪೇಟೆ: ಮಹಿಳೆಯರ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಮಹಾತ್ಮ ಗಾಂಧೀಜಿಯವರು ತಮ್ಮ ಹೋರಾಟದ ಜೀವನದುದ್ದಕ್ಕೂ ಮಹಿಳಾ ಸಬಲೀಕರಣ ಆಶಯವನ್ನು ಎತ್ತಿ ಹಿಡಿಯುತ್ತಿದ್ದರು ಎಂದು ಮಾನವ ಹಕ್ಕುಗಳ ಹೋರಾಟಗಾರ ಪ್ರೊ| ಬಿ. ಕೃಷ್ಣ ಅಭಿಪ್ರಾಯಿಸಿದರು.

ಕನ್ನಡ ವಿಶ್ವವಿದ್ಯಾಲಯದ ಒನಕೆ ಓಬವ್ವ ಅಧ್ಯಯನ ಪೀಠದ ವತಿಯಿಂದ ಮಂಗಳವಾರ ಆಯೋಜಿಸಿದ್ದ ಆಧುನಿಕ ಪೂರ್ವ ಸಂದರ್ಭ: ಆಡಳಿತ ನಿರ್ವಹಿಸಿದ ರಾಣಿಯರು ಎಂಬ ವಿಚಾರ ಸಂಕಿರಣಕ್ಕೆ ಚಾಲನೆ ನೀಡಿ ಮಾತನಾಡಿದರು.

ಸ್ತ್ರೀಯರಲ್ಲಿ ಕರುಣೆ ಎಂಬ ಅದ್ಭುತ ಮೌಲ್ಯವಿದ್ದು ಸೇವೆ ಮತ್ತು ತ್ಯಾಗದಲ್ಲಿ ಮಹಿಳೆಯರನ್ನು ಮೀರಿಸಲು ಯಾರಿಂದಲೂ ಸಾಧ್ಯವಿಲ್ಲ. ವಿನೋಬಾಜೀಯವರು ಸರ್ವೋದಯ ಸಮಾಜ ಮತ್ತು ಅಹಿಂಸಾ ಪರ ಸಮಾಜ ನಿರ್ಮಾಣವು ಸ್ತ್ರೀಯರಿಂದಲೇ ಸಾಕಾರಗೊಳ್ಳುವುದು ಎಂದು ನಂಬಿದ್ದರು ಎಂದರು.

ಗಾಂಧೀಜಿಯವರು ಉತ್ತಮ ಸಮಾಜ ನಿರ್ಮಾಣದ ಪರಿಕಲ್ಪನೆಯಲ್ಲಿ ಸತ್ಯ, ಅಹಿಂಸೆ, ಸತ್ಯಾಗ್ರಹ, ಸರ್ವೋದಯ ಚಿಂತನೆಯ ಅಂಶಗಳನ್ನು ತಮ್ಮಲ್ಲಿ ತೊಡಗಿಸಿಕೊಂಡಿದ್ದರು. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಬದುಕಿನುದ್ದಕ್ಕೂ ಜೈಲುವಾಸ ಹಾಗೂ ಉಪವಾಸ ಸತ್ಯಾಗ್ರಹ ನಡೆಸಿದರು ಎಂದರು.

ಚನ್ನಮ್ಮ ಹಳ್ಳಿಕೇರಿಯವರು ಹುಟ್ಟು ಹೋರಾಟಗಾರರು. ತಮ್ಮ ಬಾಲ್ಯ ಜೀವನದಲ್ಲಿ ಜೈಲಿನ ಅಂಗಳದಲ್ಲಿ ಕಾಲ ಕಳೆದವರು. ಗಾಂಧೀಜಿ ಮತ್ತು ವಿನೋಬಾಜೀ ಅವರ ಚಿಂತನೆಯಲ್ಲಿ ಬೆಳೆದವರು ಎಂದು ಸ್ಮರಿಸಿದರು.

ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಾ| ಸ.ಚಿ. ರಮೇಶ ಮಾತನಾಡಿ, ದೇಶದಲ್ಲಿ ಮೊಟ್ಟಮೊದಲು ಸ್ವಾತಂತ್ರ್ಯ ಸಂಗ್ರಾಮದ ಕಿಚ್ಚು ಹಚ್ಚಿದ್ದು ಧೀಮಂತ ಮಹಿಳೆ, ಝಾನ್ಸಿ ರಾಣಿ ಲಕ್ಷ್ಮೀಬಾಯಿ. ಮಹಿಳೆಯರು ಸಮಾಜದಲ್ಲಿರುವ ಎಲ್ಲ ಕೆಲಸಗಳನ್ನು ಸುಲಭವಾಗಿ ನಿಭಾಯಿಸಬಲ್ಲರು. ಆದರೆ ಚರಿತ್ರೆ ಮತ್ತು ಪರಂಪರೆಯಲ್ಲಿ ಮಹಿಳೆಯರ ಪಾತ್ರವನ್ನು ಗೌಣವಾಗಿಸಲಾಗಿದೆ. ಚರಿತ್ರೆಯನ್ನು ನೋಡುವ ಸಂದರ್ಭದಲ್ಲಿ ಕೇವಲ ಪುರುಷ ದೃಷ್ಟಿಕೋನದಿಂದ ಕಟ್ಟಿಕೊಡಲಾಗಿದೆ. ಅದನ್ನು ಮಹಿಳಾ ಪರ ದೃಷ್ಟಿಕೋನದಲ್ಲೂ ನೋಡುವ ಅಗತ್ಯವಿದೆ. ಕನ್ನಡ ವಿಶ್ವವಿದ್ಯಾಲಯದ ಒನಕೆ ಓಬವ್ವ ಅಧ್ಯಯನ ಪೀಠದಿಂದ ಚರಿತ್ರೆಯನ್ನು ಮಹಿಳಾ ದೃಷ್ಟಿಕೋನದಿಂದ ಅಧ್ಯಯನ ಮಾಡಲಾಗುವುದು. ಮುಂದಿನ ದಿನಗಳಲ್ಲಿ ಗಾಂಧಿ ಅಧ್ಯಯನ ಕೇಂದ್ರವನ್ನು ಆರಂಭಿಸಲಾಗುವುದು ಎಂದರು.

ಹೊಸಪೇಟೆ: ಕನ್ನಡ ವಿಶ್ವವಿದ್ಯಾಲಯದಲ್ಲಿ ಇವಳ ಚರಿತ್ರೆ-3 ಆಧುನಿಕ ಪೂರ್ವ ಸಂದರ್ಭ ಆಡಳಿತ ನಿರ್ವಹಿಸಿದ ರಾಣಿಯರು ವಿಚಾರ ಸಂಕಿರಣವನ್ನು ಪ್ರೊ| ಬಿ ಕೃಷ್ಣ ಉದ್ಘಾಟಿಸಿದರು.



ಹೊಸಪೇಟೆ: ವಿಚಾರ ಸಂಕಿರಣದಲ್ಲಿ ಸ್ವಾತಂತ್ರ್ಯ ಹೋರಾಟಗಾರ್ತಿ ಚನ್ನಮ್ಮ ಹಳ್ಳಿಕೇರಿ ಅವರನ್ನು ಸನ್ಮಾನಿಸಲಾಯಿತು.

ಸ್ವಾತಂತ್ರ್ಯ ಹೋರಾಟಗಾರರಾದ ಚನ್ನಮ್ಮ ಹಳ್ಳಿಕೇರಿಯವರು ಮಾತನಾಡಿ, ನಮ್ಮ ದೇಶದ ಲಿಪಿ ದೇವನಾಗರಿ. ಈ ಲಿಪಿಯಿಂದ ಎಲ್ಲ ಭಾಷೆಗಳನ್ನು ಬಹು ಸುಲಭವಾಗಿ ಕಲಿಯಬಹುದು. ನಾವು ವಿದ್ಯೆಯನ್ನು ಕಲಿತು ವಿದೇಶದ ಮೋಹಕ್ಕೆ ಬಲಿಯಾಗುತ್ತಿದ್ದೇವೆ. ನಮ್ಮ ರಾಷ್ಟ್ರದ ಅಭಿವೃದ್ಧಿ ನಮ್ಮ ಕೈಯಲ್ಲಿದ್ದು ಇದನ್ನರಿತು ದೇಶಸೇವೆ ಮಾಡಬೇಕೆಂದು ಕರೆ ನೀಡಿದರು.

ಸಮಾರಂಭದಲ್ಲಿ ಚನ್ನಮ್ಮ ಹಳ್ಳಿಕೇರಿಯವರನ್ನು ಸನ್ಮಾನಿಸಿ ಗೌರವಿಸಲಾಯಿತು. ಒನಕೆ ಓಬವ್ವ ಅಧ್ಯಯನ ಪೀಠದ ಸಂಚಾಲಕ ಪ್ರೊ. ಶೈಲಜ ಇಂ. ಹಿರೇಮಠ ಸ್ವಾಗತಿಸಿದರು. ವಿದ್ಯಾರ್ಥಿ ಭೀಮೇಶ ನಿರೂಪಿಸಿದರು. ಕುಲಸಚಿವ ಡಾ| ಎ. ಸುಬ್ಬಣ್ಣ ರೈ, ಡೀನರು, ಅಧ್ಯಾಪಕರು, ವಿದ್ಯಾರ್ಥಿಗಳು ಇದ್ದರು.





ಪ್ರಜಾವಾಣಿ ಮಂಗಳವಾರ ● ಡಿಸೆಂಬರ್ 17, 2019

### ಹಂಪಿ ಕನ್ನಡ ವಿವಿ ಆಯೋಜನೆ

# ಎರಡು ದಿನಗಳ ವಿಚಾರ ಸಂಕಿರಣ ಇಂದು

ಹೊಸಪೇಟೆ: ಹಂಪಿ ಕನ್ನಡ ವಿಶ್ವವಿದ್ಯಾಲಯದ ಒನಕೆ ಓಬವ್ವ ಅಧ್ಯಯನ ಪೀಠದ ವತಿಯಿಂದ ಮಂಗಳವಾರ 'ಆಧುನಿಕ ಪೂರ್ವ ಸಂದರ್ಭ: ಆಡಳಿತ ನಿರ್ವಹಿಸಿದ ರಾಣಿಯರು' ಕುರಿತು ಎರಡು ದಿನಗಳ ವಿಚಾರ ಸಂಕಿರಣವನ್ನು ಹಮ್ಮಿಕೊಂಡಿದ್ದಾರೆ.

ಬೆಳಿಗ್ಗೆ 10.30ಕ್ಕೆ ಮಂಟಪ ಸಭಾಂಗಣದಲ್ಲಿ ನಡೆಯುವ ವಿಚಾರ ಸಂಕಿರಣವನ್ನು ಬೆಂಗಳೂರಿನ ಮಾನವ ಹಕ್ಕುಗಳ ಹೋರಾಟಗಾರ, ವೂಡೆ ಪಿ.ಕೃಷ್ಣ ಅವರು ಉದ್ಘಾಟಿಸಲಿದ್ದಾರೆ. ಕುಲಪತಿ ಪ್ರೊ.ಸ.ಚಿ.ರಮೇಶ್ ಅಧ್ಯಕ್ಷತೆವಹಿಸಲಿದ್ದಾರೆ.

ಒನಕೆ ಓಬವ್ವ ಅಧ್ಯಯನ ಪೀಠದ ಸಂಚಾಲಕಿ ಪ್ರೊ.ಶೈಲಜಾ ಇಂ.ಹಿರೇಮಠ ಅವರು ಆಶಯ ನುಡಿಯನ್ನಾಡಲಿದ್ದಾರೆ. ಈ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ಚನ್ನಮ್ಮ ಹಳ್ಳಿಕೇರಿ ಇವರನ್ನು ಸನ್ಮಾನಿಸಲಿದ್ದಾರೆ.

ಮಧ್ಯಾಹ್ನ12.30ರಿಂದ ನಡೆಯುವ ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಶಿವಮೊಗ್ಗದ ಚಿಂತಕ ಪ್ರೊ.ರಾಜೇಂದ್ರ ಚೆನ್ನಿ ಅವರು 'ಆಡಳಿತ ವ್ಯವಸ್ಥೆ ಮತ್ತು ಮಹಿಳೆ: ಸಮಸ್ಯೆ-ಸವಾಲುಗಳು ಕುರಿತು ಉಪನ್ಯಾಸ ನೀಡಿದರೆ, 'ರಾಣಿ ಅಬ್ಬಕ್ಕ' ಕುರಿತು ಮಂಗಳೂರಿನ ಇತಿಹಾಸ ಚಿಂತಕ ಡಾ.ತುಕಾರಾಮ ಪೂಜಾರಿ ಉಪನ್ಯಾಸ ನೀಡಲಿದ್ದಾರೆ.

ಮಧ್ಯಾಹ್ನ2.30ರಿಂದ ನಡೆಯುವ ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಕರಾವಳಿ ಕರ್ನಾಟಕದ ರಾನಿಯರ ಆಳ್ವಿಕೆಯ ಸ್ವರೂಪ ಕುರಿತು ಇತಿಹಾಸ ಚಿಂತಕ ಡಾ.ಪಿ.ಎನ್.ನರಸಿಂಹಮೂರ್ತಿ ಉಪನ್ಯಾಸ ನೀಡಲಿದ್ದಾರೆ. ನಂತರ ಸರುಪುರದ ರಾಣಿಯರ ಆಳ್ವಿಕೆಯ ಸ್ವರೂಪ ಕುರಿತು ಕನ್ನಡ ವಿವಿಯ ಸಹ ಪ್ರಾಧ್ಯಾಪಕ ಡಾ.ಅಮರೇಶ್ ಯತಗಲ್ ಉಪನ್ಯಾಸ ನೀಡಲಿದ್ದಾರೆ.

ಉದಯವಾಣಿ ಬೆಂಗಳೂರು
ಭಾನುವಾರ, ಡಿಸೆಂಬರ್ 8, 2019

# ವಿದ್ಯಾರ್ಥಿಗಳೇ ರೂಪಿಸಿದ ಮೊಬೈಲ್ ಆ್ಯಪ್ ಬಿಡುಗಡೆ



ಆರ್.ಆರ್ ಶಿಕ್ಷಣ ಸಂಸ್ಥೆಯಲ್ಲಿ ನಡೆದ ಆ್ಯಪ್ ಬಿಡುಗಡೆ ಸಮಾರಂಭದಲ್ಲಿ ಶಿಕ್ಷಣ ತಜ್ಞ ಪ್ರೊ.ಪಿ. ಕೃಷ್ಣ, ಸಂಸ್ಥೆ ಅಧ್ಯಕ್ಷ ರಾಜಾ ರೆಡ್ಡಿ ಹಾಗೂ ಇತರರು ಉಪಸ್ಥಿತರಿದ್ದರು.

ಟಿ.ದಾಸರಹಳ್ಳಿ: ಶೈಕ್ಷಣಿಕ ಪ್ರಗತಿಗೆ ಪೂರಕ ಹಾಗೂ ಜ್ಞಾನಾರ್ಜನೆಗೆ ಸಹಾಯಕವಾಗುವ ಆ್ಯಪ್ ಅನ್ನು ವಿದ್ಯಾರ್ಥಿಗಳು ಅಭಿವೃದ್ಧಿಪಡಿಸಿರುವುದು ಶ್ಲಾಘನೀಯ ಎಂದು ಶಿಕ್ಷಣ ತಜ್ಞ ಪ್ರೊ.ಪಿ. ಕೃಷ್ಣ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಚಿಕ್ಕಬಾಣಾವಾರದ ಆರ್ಆರ್ ಶಿಕ್ಷಣ ಸಂಸ್ಥೆ ಸಭಾಂಗಣದಲ್ಲಿ ಶನಿವಾರ ನಡೆದ, ಸಂಸ್ಥೆ ವಿದ್ಯಾರ್ಥಿಗಳೇ ಅಭಿವೃದ್ಧಿಪಡಿಸಿರುವ ಬಹುಪಯೋಗಿ 'ಟರ್ನಿಂಗ್ ಪಾಯಿಂಟ್' ಆ್ಯಂಡ್ರಾಯ್ಡ್ ಆ್ಯಪ್ ಬಿಡುಗಡೆಗೊಳಿಸಿ ಮಾತನಾಡಿದರು. ವೈದ್ಯಕೀಯ, ಎಂಜಿನಿಯರಿಂಗ್ ಸೇರಿ ತಾಂತ್ರಿಕ ಹಾಗೂ ಉನ್ನತ ಶಿಕ್ಷಣ ಪಡೆಯಲು ಬಯಸುವ ಪದವಿ ಪೂರ್ವ ವಿದ್ಯಾರ್ಥಿಗಳಿಗೆ ಈ ಆ್ಯಪ್ ಮಾರ್ಗದರ್ಶಿಯಾಗಿದೆ. ಕೆಸೆಟ್, ಜೆಇಇ, ನೀಟ್ ರೀತಿಯ ಸ್ಪರ್ಧಾತ್ಮಕ ಪರೀಕ್ಷೆ, ಪ್ರವೇಶ ಪರೀಕ್ಷೆಗಳಿಗೆ ವಿದ್ಯಾರ್ಥಿಗಳು ಸಿದ್ಧರಾಗಲು ಆ್ಯಪ್ ಪ್ರಯೋಜನಕಾರಿಯಾಗಿದೆ ಎಂದರು. ಆರ್.ಆರ್ ಶಿಕ್ಷಣ ಸಂಸ್ಥೆ ಅಧ್ಯಕ್ಷ ರಾಜಾ ರೆಡ್ಡಿ ಮಾತನಾಡಿ, ಗುಣಮಟ್ಟದ ಶಿಕ್ಷಣದ ಜತೆಗೆ ತಾಂತ್ರಿಕ ಪರಿಣತಿ ಪಡೆಯಲು ಉತ್ತಮ ಗ್ರಂಥಾಲಯ ಹಾಗೂ ಪ್ರಯೋಗಾಲಯ ಸೌಲಭ್ಯ ಕಲ್ಪಿಸಲಾಗಿದೆ. ಇದರ ಸದುಪಯೋಗ ಪಡೆದು ವಿದ್ಯಾರ್ಥಿಗಳು ಆ್ಯಪ್ ಅಭಿವೃದ್ಧಿಪಡಿಸಿ ಸಂಸ್ಥೆಗೆ ಹೆಮ್ಮೆ ತಂದಿದ್ದಾರೆ ಎಂದರು. ಆರ್.ಆರ್ ಶಿಕ್ಷಣ ಸಂಸ್ಥೆಯ ನಿರ್ದೇಶಕ ಎಚ್.ಆರ್.ಅರುಣ್ ಮಾತನಾಡಿ, ಸಂಸ್ಥೆಯ ತಾಂತ್ರಿಕ ವಿಭಾಗದ ವಿದ್ಯಾರ್ಥಿಗಳು ಅಭಿವೃದ್ಧಿಪಡಿಸಿರುವ ಆ್ಯಪ್ ಮಾಹಿತಿಯ ಕಣಜವಾಗಿದ್ದು, ವಿದ್ಯಾರ್ಥಿಗಳ ಉಜ್ವಲ ಭವಿಷ್ಯಕ್ಕೆ ಹೊಸ ತಿರುವು ನೀಡಲಿದೆ. ಪ್ರಮುಖವಾಗಿ ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಇದು ಹೆಚ್ಚು ಉಪಯುಕ್ತವಾಗಿದೆ. ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ಮಾತ್ರವಲ್ಲದೆ, ವಿಶ್ವದಾದ್ಯಂತ ಪ್ರವೇಶ ಪರೀಕ್ಷೆ ಹಾಗೂ ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳುವ ವಿದ್ಯಾರ್ಥಿಗಳ ಪಾಲಿಗೆ ಟರ್ನಿಂಗ್ ಪಾಯಿಂಟ್ ಆ್ಯಪ್ ವರದಾನವಾಗಿದೆ ಎಂದರು. ಕಾರ್ಯಕ್ರಮದಲ್ಲಿ ನಗರದ ವಿವಿಧ ಪಿಯು ಕಾಲೇಜಿನ 800

ಈ ಸಂಜೆ ಶನಿವಾರ, 07-12-2019

# ಆರ್‌ಆರ್ ವಿದ್ಯಾಸಂಸ್ಥೆಯ ಟರ್ನಿಂಗ್ ಪಾಯಿಂಟ್ ಆ್ಯಪ್ ಬಿಡುಗಡೆ



ಪೀಣ್ಯ ದಾಸರಹಳ್ಳಿ, ಡಿ.7- ಚಿಕ್ಕಬಾಣಾವಾರದ ಆರ್.ಆರ್ ವಿದ್ಯಾಸಂಸ್ಥೆಯ ಆಡಿಟೋರಿಯಂದಲ್ಲಿ ವಿದ್ಯಾರ್ಥಿಗಳು ಅಭಿವೃದ್ಧಿ ಪಡಿಸಿರುವ ಬಹುಪಯೋಗಿ ಟರ್ನಿಂಗ್ ಪಾಯಿಂಟ್ ಆ್ಯಪ್‌ನ್ನು ಬಿಡುಗಡೆಗೊಳಿಸಲಾಯಿತು.

ವೈದ್ಯಕೀಯ ಇಂಜಿನಿಯರಿಂಗ್ ಸೇರಿದಂತೆ ತಾಂತ್ರಿಕ ಹಾಗೂ ಉನ್ನತ ಶಿಕ್ಷಣ ಪಡೆಯಲು ಬಯಸುವ ಪದವಿ ಪೂರ್ವ ವಿದ್ಯಾರ್ಥಿಗಳಿಗಾಗಿ ಈ ಆ್ಯಪ್‌ನ್ನು ಸಂಸ್ಥೆಯ ತಾಂತ್ರಿಕ ವಿದ್ಯಾರ್ಥಿಗಳೇ ಅಭಿವೃದ್ಧಿ ಪಡಿಸಿರುವುದು ಈ ವಿಶೇಷ.

ಹಿಂದಿನ ವರ್ಷಗಳ ಪ್ರಶ್ನೆಪತ್ರಿಕೆಗಳು ಮತ್ತು ಉತ್ತರಗಳು, ಕೆಸೆಟ್ ಜೆಇಇ, ನೀಟ್ ಒಳಗೊಂಡ ಸ್ಪರ್ಧಾತ್ಮಕ ಪರೀಕ್ಷೆ, ಪ್ರವೇಶ ಪರೀಕ್ಷೆ ಗಳಿಗೆ ವಿದ್ಯಾರ್ಥಿಗಳು ಸಿದ್ಧರಾಗಲು ಈ ಆ್ಯಪ್ ತುಂಬಾ ಪ್ರಯೋಜನಕಾರಿಯಾಗಿದೆ, ಅಲ್ಲದೆ ಪದವಿ ಪೂರ್ವ ಶಿಕ್ಷಣ ಮಂಡಳಿಯ ಪರೀಕ್ಷಾ ಪ್ರಾಧಿಕಾರದ ಸುತ್ತೋಲೆ ಮತ್ತಿತರ ಅಮೂಲ್ಯ ಮಾಹಿತಿ ಭಂಡಾರ ಇದರಲ್ಲಿದೆ.

ಆರ್.ಆರ್ ವಿದ್ಯಾಸಂಸ್ಥೆಯ ಈ ಆ್ಯಪ್ ರಾಜ್ಯ ಹಾಗೂ ರಾಷ್ಟ್ರದ ಅಷ್ಟೇ ಅಲ್ಲದೆ ವಿಶ್ವದಾದ್ಯಂತ ಪ್ರವೇಶ ಪರೀಕ್ಷೆ ಬರೆಯುವವರಿಗೆ ಮಾರ್ಗದರ್ಶಿಯಾಗಿದೆ.

ಟರ್ನಿಂಗ್ ಪಾಯಿಂಟ್ ಆ್ಯಪ್ ಕುರಿತು ಅಧ್ಯಕ್ಷ, ಶಿಕ್ಷಣ ತಜ್ಞ ಮೂಡೇ ಪಿ. ಕೃಷ್ಣ ಮಾತನಾಡಿ, ತಾಂತ್ರಿಕ ವಿದ್ಯಾರ್ಥಿಗಳು ಶೈಕ್ಷಣಿಕ ಪ್ರಗತಿಗೆ ಪೂರಕವಾಗಿರುವ ಅನರ್ಘ್ಯ ರತ್ನವನ್ನೇ ಅವಿಷ್ಕರಿಸಿದ್ದಾರೆ. ವಿದ್ಯಾರ್ಥಿಗಳ ಬದುಕಿಗೆ ಇದು ಹೊಸ ತಿರುವು ನೀಡಲಿದೆ. ಅದರಲ್ಲೂ ಪ್ರಮುಖವಾಗಿ ಗ್ರಾಮೀಣ ಪ್ರದೇಶದವರಿಗೆ ಅತ್ಯಂತ ಪ್ರಯೋಜನಕಾರಿಯಾಗಿದೆ ಇದೊಂದು ಉತ್ತಮ ಕಾರ್ಯ ಎಂದು ಶ್ಲಾಘಿಸಿದರು.

ಈ ವೇಳೆ ಆ್ಯಪ್ ಸಿದ್ಧಪಡಿಸಿದ ವಿದ್ಯಾರ್ಥಿಗಳನ್ನು ಮೂಡೇ ಪಿ.ಕೃಷ್ಣ ಸನ್ಮಾನಿಸಿದರು.

ಕಾರ್ಯಕ್ರಮದಲ್ಲಿ ನಗರದ ವಿವಿಧ ಪಿಯು ಕಾಲೇಜುಗಳಿಂದ 800 ಕ್ಕೂ ಹೆಚ್ಚು ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಸಂಸ್ಥೆಯ ಅಧ್ಯಕ್ಷ ರಾಜರೆಡ್ಡಿ, ಬ್ಯಾಂಕ್ ಆಫ್ ಬರೋಡಾದ ಆಡಳಿತಾಧಿಕಾರಿ ರವಿ, ವಿಭಾಗೀಯ ಆಡಳಿತಾಧಿಕಾರಿ ಮಹೇಶ್, ಆರ್.ಆರ್. ಶಿಕ್ಷಣ ಸಂಸ್ಥೆಯ ನಿರ್ದೇಶಕ ಎಚ್.ಆರ್.ಅರುಣ್, ಕಾರ್ಯದರ್ಶಿ ಎಚ್.ಆರ್.ಕಿರಣ್ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ

ಬುಧವಾರ, 4 ಡಿಸೆಂಬರ್ 2019



ಡಿ.ಎಚ್. ತಾವಣ್ಣ ನೀಲಾಂಬಿಕೆ ಸಾಂಸ್ಕೃತಿಕ ಟ್ರಸ್ಟ್ ಏರ್ಪಡಿಸಲಾಗಿದ್ದ 'ಹಾಡು ಹಬ್ಬ' ಕಾರ್ಯಕ್ರಮದ ಸಾಂಸ್ಕೃತಿಕ ಮತ್ತು ಸಂಗೀತೋತ್ಸವವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಭವನದ ಅಧ್ಯಕ್ಷ ವೂಡೆ ಪಿ. ಕೃಷ್ಣರವರನ್ನು ಟ್ರಸ್ಟ್ ಅಧ್ಯಕ್ಷೆ ಡಾ. ಆರ್. ನೀಲಾಂಬಿಕೆ ಹಾಗೂ ಮಲೆನಾಡು ಸೌರಭ ಟ್ರಸ್ಟ್ ಅಧ್ಯಕ್ಷ ಮುರುಳಿರವರು ಸನ್ಮಾನಿಸಿದರು.

03-12-2019



ಡಿ.ಎಚ್.ರಾಜಣ್ಣ ನೀಲಾಂಬಿಕೆ ಸಾಂಸ್ಕೃತಿಕ ಟ್ರಸ್ಟ್ ಹಮ್ಮಿಕೊಂಡಿದ್ದ ಹಾಡುಹಬ್ಬ ಕಾರ್ಯಕ್ರಮವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೋಡೆ ಪಿ.ಕೃಷ್ಣ ಉದ್ಘಾಟಿಸಿದರು. ಮಲೆನಾಡು ಸೌರಭ ಟ್ರಸ್ಟ್‌ನ ಅಧ್ಯಕ್ಷ ಶ್ರೀಮುರಳಿ, ಶಿಕ್ಷಣ ಇಲಾಖೆಯ ಅಧೀಕ್ಷಕಿ ಸುಜಾತಾ, ಟ್ರಸ್ಟ್‌ನ ಅಧ್ಯಕ್ಷೆ ಡಾ.ಆರ್.ನೀಲಾಂಬಿಕೆ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ ಶುಕ್ರವಾರ, 22 ನವೆಂಬರ್ 2019



ಶೇಷಾದ್ರಿಪುರಂ ಸಂಜೆ ಪದವಿಪೂರ್ವ ಕಾಲೇಜಿನಲ್ಲಿ ನಿನ್ನೆ ನಡೆದ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಪ್ರಾಂಶುಪಾಲರಾದ ಪ್ರೊ.ಆರ್.ಮಹಾಲಕ್ಷ್ಮೀ ರವರನ್ನು ಸಂಸ್ಥೆ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ ರವರು ಸನ್ಮಾನಿಸಿದರು. ಟ್ರಸ್ಟ್‌ನ ಧರ್ಮದರ್ಶಿ ಕೃಷ್ಣಸ್ವಾಮಿ, ಡಬ್ಲೂಡಿ. ಅಶೋಕ್, ಗೌರವ ಸಹಾಯಕ ಕಾರ್ಯದರ್ಶಿ ಎಂ.ಎಸ್.ನಟರಾಜ್, ಪ್ರಾಂಶುಪಾಲ ಎನ್.ಎಸ್.ಸತೀಶ್ ಇದ್ದಾರೆ.

ನಾವು ಕನ್ನಡಿಗರು

ಗುರುವಾರ
14-11-2019

# ನಾಡು ಕಟ್ಟಿದ ಮಹನೀಯರ ಸ್ಮರಣೆ ನಮ್ಮ ಕರ್ತವ್ಯ: ಡಾ॥ ಕೃಷ್ಣ



ಬೆಂಗಳೂರು: ನಮ್ಮ ಕನ್ನಡ ನಾಡು ಪವಿತ್ರ ಭೂಮಿ ನಮ್ಮಲ್ಲಿ ಕಲೆ, ಸಾಹಿತ್ಯ, ಸಂಸ್ಕೃತಿ ಸಂಪದ್ಭರಿತವಾಗಿದೆ. ಈ ನಾಡಿನ ಸಾಂಸ್ಕೃತಿಕ ಮಹತ್ವವನ್ನು, ಈ ನಾಡು ಕಟ್ಟಿದ ಮಹನೀಯರ ಸ್ಮರಣೆ ಮತ್ತು ಕನ್ನಡವನ್ನು ಔನ್ನತ್ಯ ಮಟ್ಟಕ್ಕೆ ಕೊಂಡೊಯ್ಯುವ ಕೆಲಸವನ್ನು ಇಂದಿನ ಯುವ ಸಮೂಹದಲ್ಲಿ ಜಾಗೃತಿ ಮೂಡಿಸಬೇಕಿದೆ ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿಗಳೂ, ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ॥ ವೂಡೇ ಪಿ. ಕೃಷ್ಣ ಅಭಿಪ್ರಾಯಪಟ್ಟರು. ಅವರು ಶೇಷಾದ್ರಿಪುರಂ ಪಿ.ಯು. ಕಾಲೇಜಿನಲ್ಲಿ ಆಯೋಜಿಸಿದ್ದ 64ನೇ ವರ್ಷದ ಕರ್ನಾಟಕ ರಾಜ್ಯೋತ್ಸವ ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಖ್ಯಾತ ವಿಚಾರವಾದಿ ಡಾ॥ ಹುಲಿಕಲ್ ನಟರಾಜ್ ಈ ದೇಶದಲ್ಲಿ ದೇವರು, ಧರ್ಮ, ಮತ ಮಂದಿರಗಳು ಮೌಢ್ಯವನ್ನು ಬಿತ್ತುತ್ತಿವೆ. ಇಂದಿನ ಜನ ಭಯದ ವಾತಾವರಣದಲ್ಲಿ ಬದುಕುತ್ತಿದ್ದು, ಮಾತಿನಲ್ಲೆ ಮನೆ ಕಟ್ಟುತ್ತಿದ್ದಾರೆ. ವೈಚಾರಿಕತೆಯನ್ನು ಬೆಳೆಸಬೇಕಾದ ಇಂದಿನ ರಾಜ್ಯ-ದೇಶದ ಶಿಕ್ಷಣ ವ್ಯವಸ್ಥೆ ಹದಗೆಟ್ಟು ಹೋಗಿದೆ, ಅದನ್ನು ಸರಿ ಮಾಡುವ ನಿಟ್ಟಿನಲ್ಲಿ ಮನಸ್ಸು ಮಾಡುತ್ತಿರುವ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳು ನಾಡು ನುಡಿ ಚಿಂತನೆಯ ಜೊತೆಗೆ, ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸುತ್ತಿರುವುದು ಒಳ್ಳೆಯ ಸಂಗತಿ ಎಂದರು.

ಕರ್ನಾಟಕ ಬಾಲವಿಕಾಸ ಅಕಾಡೆಮಿಯ ಅಧ್ಯಕ್ಷರೂ, ಖ್ಯಾತ ಗಾಯಕರಾದ ಡಾ॥ ಕಿಕ್ಕೇರಿ ಕೃಷ್ಣಮೂರ್ತಿಯವರು ಕನ್ನಡ ನಾಡಿನ ಹೆಮ್ಮೆಯ ಮಹಾಕವಿ, ರಾಷ್ಟ್ರಕವಿಯನ್ನು ಸ್ಮರಿಸಿಕೊಳ್ಳುತ್ತಾ ಅವರು ಬರೆದಿರುವ ನಾಡಗೀತೆಯನ್ನು ಎರಡೆರಡು ಸಾರಿ ಹಾಡಬಾರದು, ಎಳೆದು ಎಳೆದು ಹಾಡದೆ ನೇರವಾಗಿ ಹಾಡುತ್ತಾ ಹೋದರೆ [illegible] ನಿಮಿಷದಲ್ಲಿ ಹಾಡಬಹುದಾಗಿದೆ. ಕೆಲವರು ನಾಡಗೀತೆಯ ಬಗ್ಗೆ ಅಪಸ್ವರ ಎತ್ತಿರುವುದು ಸಾಹಿತ್ಯ ಲೋಕ ಮತ್ತು ಸಾಂಸ್ಕೃತಿಕ ಲೋಕಕ್ಕೆ ಅವಮಾನ ಎಂದರಲ್ಲದೆ ಸಾರ್ವಜನಿಕ ಹಾಗೂ ವಿದ್ಯಾರ್ಥಿಗಳಿಗೆ ನಾಡಗೀತೆಯನ್ನು ಹಾಡುವ ಬಗೆಯನ್ನು ಸ್ವತಃ ಹಾಡಿ ತಿಳಿಸಿ ಕೊಟ್ಟರಲ್ಲದೆ, ಕನ್ನಡ ಭಾಷೆ ಎಲ್ಲಿಯೂ ಹೋಗಿಲ್ಲ, ಇನ್ನು ಚೆನ್ನಾಗಿಯೇ ಬೆಳೆಯುತ್ತಿದೆ, ಸಾಗರದಾಚೆಯ ದೇಶ-ವಿದೇಶಗಳಲ್ಲಿಯೂ ಪ್ರಜ್ವಲಿಸುತ್ತಿದೆ ಎಂದರು. ರಂಗಭೂಮಿ ನಿರ್ದೇಶಕಿ ನಿರ್ಮಲನಾದನ್‌ರವರು ಮಕ್ಕಳಲ್ಲಿ ರಂಗಾಸಕ್ತಿಯ ಬಗ್ಗೆ ತಿಳಿಸಿ ಕೊಟ್ಟರಲ್ಲದೆ ಇವತ್ತಿನ ಟಿ.ವಿ, ಸಿನಿಮಾ ಧಾರಾವಹಿಗಳಲ್ಲಿ ಹಾಸ್ಯದ ಹೆಸರಲ್ಲಿ ಅಪಹಾಸ್ಯ ಬರುವ ಹಾಗೆ ನಡೆದುಕೊಳ್ಳುತ್ತಿರುವುದನ್ನು ಖಂಡಿಸಿ ಮಹಿಳೆಯರು ಕುಟುಂಬಸ್ಥರು ನೋಡಲಾಗದ ಸ್ಥಿತಿಯನ್ನು ತಂದಿಟ್ಟಿದ್ದಾರೆ, ಪ್ರತಿಭಟಿಸುವ ಮನಸ್ಥಿತಿ ಇಂದಿನ ಜನರಿಗಿಲ್ಲ ಎಂದರು.

ಇದೇ ಸಂದರ್ಭದಲ್ಲಿ ಡಾ॥ ಹುಲಿಕಲ್ ನಟರಾಜ್, ಡಾ॥ ಕಿಕ್ಕೇರಿ ಕೃಷ್ಣಮೂರ್ತಿ ಮತ್ತು ನಿರ್ಮಲನಾದನ್ ಅವರನ್ನು ಗೌರವಿಸಿ ಅಭಿನಂದಿಸಲಾಯಿತು. ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಆರ್. ವಿ. ಮಂಜುನಾಥರವರು ಪ್ರಾಸ್ತಾವಿಕವಾಗಿ ಮಾತನಾಡುತ್ತಾ ವೇದಿಕೆಯ ಗಣ್ಯರನ್ನು ಸ್ವಾಗತಿಸಿದರು.

ವೇದಿಕೆಯಲ್ಲಿ ಉಪನ್ಯಾಸಕರ ಸಂಘದ ಪ್ರೊ ಎಸ್. ಆರ್. ವೆಂಕಟೇಶ್, ಬಿ.ವಿ. ರಾಧಿಕಾ, ಉಪನ್ಯಾಸಕರಾದ ಡಾ॥ ಸಿಸಿರಾ, ಡಾ॥ ಬಿ.ಎಸ್. ಅಶೋಕ್‌ಕುಮಾರ್, ಎಂ.ಎಸ್. ಬಬಿತಾ, ಸಹನಾ, ಕಾವ್ಯ, ಸುರೇಖ. ಆರ್, ಅಂಬಿಕಾ, ಕಾರ್ತಿಕ್, ಮಹಂತೇಶ್, ಸೌಮ್ಯ ಕೆ.ಸಿ. ಮುನಿಯಪ್ಪ, ಕಛೇರಿ ಸಿಬ್ಬಂದಿ ಶ್ರೀಕಾಂತ.ಎ ಮುಂತಾದವರಿದ್ದರು.

ಈ ಸಂಜೆ

ಬುಧವಾರ, 13.11.2019

# ಆಧುನಿಕತೆಯಲ್ಲಿ ಕನ್ನಡ-ಕನ್ನಡಿಗ ಇನ್ನೂ ಉನ್ನತ ಸ್ಥಾನ ಪಡೆಯಬೇಕಿದೆ



**ಬೆಂಗಳೂರು, ನ.13**-ಕನ್ನಡ, ಕನ್ನಡಿಗ ಆಧುನಿಕತೆಯಲ್ಲಿ ಇನ್ನೂ ಉನ್ನತ ಸ್ಥಾನ ಪಡೆಯಬೇಕು ಎಂದು ಖ್ಯಾತ ವಿಮರ್ಶಕ ಡಾ.ಸಿ.ಎನ್.ರಾಮಚಂದ್ರನ್ ತಿಳಿಸಿದರು.

ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನಲ್ಲಿ ಕನ್ನಡ ಸಾಹಿತ್ಯ ವೇದಿಕೆ ವತಿಯಿಂದ ಕವಿ ಸತ್ಯಮಂಗಲ ಮಹಾದೇವ ಅವರ ಪಂಚವರ್ಣದ ಹಂಸ ಕವನಸಂಕಲನ ಬಿಡುಗಡೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಹಂಸ -ಪರಮಹಂಸ- ಪ್ರಜ್ಞಾಸ್ತರ- ಯೋಗಶಾಸ್ತ್ರದ ಪರಿಕಲ್ಪನೆಗಳ ಬಗ್ಗೆ ವಿವರಣೆ ನೀಡಿದರು.

ಹಂಸ ನಮ್ಮ ಸಂಸ್ಕೃತಿಯ ಭಾಗವಾಗಿ ಅನೇಕ ಧ್ವನಿಗಳನ್ನು ಹೊಂದಿದೆ. ಕವನಗಳು ಯೋಗಸ್ತರದಲ್ಲಿ ಎತ್ತರದ ಪರಿಕಲ್ಪನೆ, ಅನೇಕ ಬಗೆಯ ಆಶಯಗಳನ್ನು ಹೊಂದಿವೆ. ಕೆಲವು ಕವನಗಳು ವ್ಯವಸ್ಥೆಗಳ ವಿಡಂಬನೆಯ ಸ್ಥಿತಿಯನ್ನು ಬಿಂಬಿಸುತ್ತವೆ ಎಂದು ತಿಳಿಸಿದರು.

ಕೃತಿಯನ್ನು ಲೋಕಾರ್ಪಣೆ ಮಾಡಿ ಮಾತನಾಡಿದ ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಡಾ.ಮಲ್ಲೇಪುರಂ ಜಿ.ವೆಂಕಟೇಶ್, ಸಂಜೆ ಕಾಲೇಜಿಗೆ ಉತ್ತಮ ಇತಿಹಾಸವಿದೆ. ವಿದ್ಯಾರ್ಥಿಗಳ ಶೈಕ್ಷಣಿಕ ಉನ್ನತಿ ಜೊತೆಗೆ ಸಾಹಿತ್ಯದ ವಿವಿಧ ಪ್ರಾಕಾರಗಳಲ್ಲಿ ಅಭಿವೃದ್ಧಿಯನ್ನು ವ್ಯಕ್ತಪಡಿಸುವಂತಹ ಕೃತಿ ಲೋಕಾರ್ಪಣೆ ಕೆಲಸವನ್ನು ಶೇಷಾದ್ರಿಪುರಂ ಕಾಲೇಜು ಮಾಡುತ್ತಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಪಂಚವರ್ಣದ ಹಂಸ ಕೃತಿಯು ಕಾವ್ಯ ಭಾಷೆಯನ್ನು ಕಟ್ಟುವಲ್ಲಿ ಧ್ಯಾನಸ್ಥ ಸ್ಥಿತಿ ಇರುವುದನ್ನು ತಿಳಿಸುತ್ತದೆ. ಇದರ ಕಾವ್ಯದ ಹಿಂದೆ ವಚನಕಾರರಿದ್ದಾರೆ. ವೈಚಾರಿಕ ಸಂವಾದಗಳಿಗೆ ಪೂರಕವಾಗಿ ತೆರೆದುಕೊಂಡಿದೆ. ಕಾವ್ಯ ಕೌಶಲ್ಯ ಎದ್ದುಕಾಣುತ್ತಿದೆ ಎಂದು ತಿಳಿಸಿದರು.

ಸತ್ಯಮಂಗಲ ಮಹಾದೇವ ಮಾತನಾಡಿ, ನಾನು ಬಿದಿರು ಕೊಳವೆ ಮಾತ್ರ. ನಿಮ್ಮೆಲ್ಲರ ಸ್ವರವನ್ನು ನಾನು ಬಿಂಬಿಸುತ್ತೇನೆ ಎಂದರು.

ಸಮಾರಂಭದ ಅಧ್ಯಕ್ಷತೆಯನ್ನು ಡಾ.ವೂಡೇ ಪಿ.ಕೃಷ್ಣ ವಹಿಸಿ ಮಾತನಾಡಿ, ಅರಳುವ ಪ್ರತಿಭೆಗಳಿಗೆ ಹಾಗೂ ವಿದ್ವಾಂಸರಿಗೆ ಅವಕಾಶ ಮಾಡಿಕೊಡುವುದು ನಮ್ಮ ಸಂಸ್ಥೆಯ ಉದ್ದೇಶವಾಗಿದೆ ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಸಂಸ್ಥೆಯ ಧರ್ಮದರ್ಶಿ ಡಬ್ಲ್ಯು.ಡಿ. ಅಶೋಕ್, ಪ್ರಾಂಶುಪಾಲ ಪ್ರೊ.ಎನ್.ಎಸ್.ಸತೀಶ್ ಮತ್ತಿತರರು ಉಪಸ್ಥಿತರಿದ್ದರು.

ಉದಯವಾಣಿ ಬುಧವಾರ, ನವೆಂಬರ್ 13, 2019



ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು ಮಂಗಳವಾರ ಹಮ್ಮಿಕೊಂಡಿದ್ದ ಕರ್ನಾಟಕ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ವಿಚಾರವಾದಿ ಡಾ.ಹುಲಿಕಲ್ ನಟರಾಜ್, ಗಾಯಕ ಕಿಕ್ಕೇರಿ ಕೃಷ್ಣಮೂರ್ತಿ ಭಾಗವಹಿಸಿದ್ದರು.

ಬುಧವಾರ, 13, ನವೆಂಬರ್, 2019,



ಶೇಷಾದ್ರಿಪುರ ದತ್ತಿ ಸಭಾಂಗಣದಲ್ಲಿ ನಡೆದ ಕನ್ನಡ ರಾಜ್ಯೋತ್ಸವ ಸಮಾರಂಭವನ್ನು ದೀಪ ಬೆಳಗಿಸುವ ಮೂಲಕ ಉದ್ಘಾಟಿಸಲಾಯಿತು. ಈ ವೇಳೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಸಾಹಿತಿ ಪುಲಿಕೆಲ್ ನಟರಾಜ್, ಗಾಯಕ ಕಿಕ್ಕೇರಿ ಕೃಷ್ಣಮೂರ್ತಿ ಮತ್ತಿತರರಿದ್ದರು. ನಾಡು

ಮಂಗಳವಾರ, 12.11.2019



ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿಂದು ಹಮ್ಮಿಕೊಂಡಿದ್ದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೆ. ಪಿ. ಕೃಷ್ಣ ಉದ್ಘಾಟಿಸಿದರು. ವಿಚಾರವಾದಿ ಡಾ. ಹುಲಿಕಲ್ ನಟರಾಜ್, ಗಾಯಕ ಡಾ. ಕಿಕ್ಕೇರಿ ಕೃಷ್ಣಮೂರ್ತಿ, ರಂಗಭೂಮಿ ಕಲಾವಿದೆ ನಿರ್ಮಲ ನಾದನ್, ಪ್ರಾಂಶುಪಾಲ ಪ್ರೊ. ಮಂಜುನಾಥ್ ಈ ಸಂದರ್ಭದಲ್ಲಿದ್ದರು.

ನಮ್ಮ ರಾಷ್ಟ್ರನೀತಿ

ನವೆಂಬರ್ 10, 2019

# ಸಿಸಿರಾ ದಂಪತಿಗಳಿಗೆ ಆತ್ಮೀಯ ಸನ್ಮಾನ



ಇತ್ತೀಚೆಗೆ ಸಾಂಸ್ಕೃತಿಕ ಪರಿಚಾರಕ, ಕವಿ ಎಸ್.ರಾಮಲಿಂಗೇಶ್ವರ (ಸಿರಿರಾ) ಅವರ "ನಿನ್ನ ಪ್ರೀತಿಯ ಹಿಂದೆ" ಕವನ ಸಂಕಲನ ಲೋಕಾರ್ಪಣೆಗೊಂಡಿತು. ಆ ಸಂದರ್ಭದಲ್ಲಿ ಸಿಸಿರಾ ಮತ್ತು ಹೇಮಾವತಿ ದಂಪತಿಗಳನ್ನು ಆತ್ಮೀಯವಾಗಿ ಸನ್ಮಾನಿಸಲಾಯಿತು. ಡಾ.ವೂಡೇ ಪಿ.ಕೃಷ್ಣ, ಡಾ. ಕೆ.ಪಿ.ಪುತ್ತೂರಾಯ, ಪಾನ್ಯಂ ನಟರಾಜ್ ಮತ್ತಿತರರು ಉಪಸ್ಥಿತರಿದ್ದಾರೆ.

ಕಸ್ತೂರಿ ಪ್ರಭ

ನವೆಂಬರ್, 2019



ಶೇಷಾದ್ರಿಪುರಂ ಕಾಲೇಜಿನಲ್ಲಿ ಡಾ. ಎಸ್. ರಾಮಲಿಂಗೇಶ್ವರ (ಸಿಸಿರಾ) ಇವರು ನಡೆಸಿಕೊಟ್ಟ ಕಾರ್ಯಕ್ರಮದಲ್ಲಿ ಶ್ರೀಮತಿ ವರಲಕ್ಷ್ಮಿ, ಕನ್ನಡ ಕಟ್ಟಾಳು ಹನುಮಂತರಾಯ, ಅವರನ್ನು ಅಭಿನಂದಿಸಿ, ಗೌರವಿಸಲಾಯಿತು. ನಿವೃತ್ತ ಐಎಎಸ್ ಅಧಿಕಾರಿ ಡಾ. ಸಿ. ಸೋಮಶೇಖರ್, ಮಾಜಿ ಮೇಯರ್ ಜೆ. ಹುಚ್ಚಪ್ಪ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ಮಾಯಣ್ಣ, ಕೆ. ನರಸಿಂಹಶೆಟ್ಟಿ, ಹಿರಿಯ ಪತ್ರಕರ್ತರು ಜಾಣಗೆರೆ ವೆಂಕಟರಾಮಯ್ಯ, ಎಂ. ತಿಮ್ಮಯ್ಯ, ಆರ್. ಶಾಂತಲಾ ಸರೇಶ್ ಹಾಗು ರು. ಬಸಪ್ಪ ಚಿತ್ರದಲ್ಲಿದ್ದಾರೆ.

ಕನ್ನಡಪ್ರಭ ಬುಧವಾರ 6.11.2019




ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ 'ಕನ್ನಡಪ್ರಭ' ಪತ್ರಿಕೆಯ ಸಮನ್ವಯ ಮತ್ತು ವಿಶೇಷ ಯೋಜನೆ ಸಂಪಾದಕ ಬಿ.ವಿ.ಮಲ್ಲಿಕಾರ್ಜುನಯ್ಯ ಅವರನ್ನು ಶೇಷಾದ್ರಿಪುರ ಶಿಕ್ಷಣ ದತ್ತಿ ಸಂಸ್ಥೆಯ ಅಧ್ಯಕ್ಷ ಪಂಡಿತಾರಾಧ್ಯ ಹಾಗೂ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಸನ್ಮಾನಿಸಿದರು.

# ‘ಕನ್ನಡಪರ ಸಂಘಟನೆಗಳಲ್ಲಿ ಹೆಚ್ಚುತ್ತಿದೆ ಭಿನ್ನಾಭಿಪ್ರಾಯ’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಕನ್ನಡಪರ ಸಂಘಟನೆಗಳ ನಡುವೆ ಭಿನ್ನಾಭಿಪ್ರಾಯ ಹೆಚ್ಚಾಗುತ್ತಿದೆ. ಇಂತಹ ಸಂಘಟನೆಗಳ ಅಧ್ಯಕ್ಷರು ತಾವು ಬೆಳೆಯುತ್ತಿದ್ದಾರೆಯೇ ವಿನಾ ಕಾರ್ಯಕರ್ತರು ಅಥವಾ ಸದಸ್ಯರನ್ನು ಬೆಳೆಸುತ್ತಿಲ್ಲ’ ಎಂದು ಹಿರಿಯ ಸಾಹಿತಿ ಜಾಣಗೆರೆ ವೆಂಕಟರಾಮಯ್ಯ ಹೇಳಿದರು.

ನಗರದಲ್ಲಿ ಭಾನುವಾರ ನಡೆದ ಕನ್ನಡ ಹೋರಾಟಗಾರ ಹನುಮಂತರಾಯರ ಅಭಿನಂದನಾ ಸಮಾರಂಭದಲ್ಲಿ ಮಾತನಾಡಿದ ಅವರು, ‘ಕನ್ನಡವನ್ನೇ ಪ್ರವೃತ್ತಿಯನ್ನಾಗಿ ದುಡಿದ ಹನುಮಂತರಾಯರು ವಿಭಿನ್ನವಾಗಿ ನಿಲ್ಲುತ್ತಾರೆ’ ಎಂದು ಶ್ಲಾಘಿಸಿದರು.

ಐಎಎಸ್ ನಿವೃತ್ತ ಅಧಿಕಾರಿ ಸಿ. ಸೋಮಶೇಖರ್, ‘ರಾಜಕಾರಣಿಗಳು, ಅಧಿಕಾರಿಗಳಲ್ಲಿ ಕನ್ನಡದ ಬಗ್ಗೆ ಅಭಿಮಾನ ಇರಬೇಕು’ ಎಂದರು.

ಉಪನ್ಯಾಸಕ ರಾಮಲಿಂಗೇಶ್ವರ ಸಂಪಾದಕತ್ವದ ‘ಶಬ್ದದೊಳಗಿನ ನಿಶಬ್ದ-ಹನುಮಂತರಾಯ’ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು.



ಕಾರ್ಯಕ್ರಮದಲ್ಲಿ ಹನುಮಂತರಾಯ ದಂಪತಿಯನ್ನು ಸನ್ಮಾನಿಸಲಾಯಿತು

ಸಂಜೆವಾಣಿ | ಭಾನುವಾರ 3 ನವೆಂಬರ್ 2019



ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಕನ್ನಡ ಕಟ್ಟಾಳು ಹನುಮಂತರಾಯ ದಂಪತಿಯನ್ನು ಅಭಿನಂದಿಸಲಾಯಿತು. ನಿವೃತ್ತ ಐಎಎಸ್ ಅಧಿಕಾರಿ ಡಾ. ಸಿ. ಸೋಮಶೇಖರ್, ಮಾಜಿ ಮೇಯರ್ ಜೆ. ಹುಚ್ಚಪ್ಪ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ಮತ್ತಿತರರು ಇದ್ದಾರೆ.

# ಕನ್ನಡದ ಕಡತಕ್ಕೆ ಆದ್ಯತೆ ನೀಡುತ್ತಿದ್ದೆ

ಬೆಂಗಳೂರು, ನ.3– ಆಂಗ್ಲ ಭಾಷೆಯಲ್ಲಿ ಸರ್ಕಾರಿ ಮತ್ತು ಖಾಸಗಿಗೆ ಸಂಬಂಧಿಸಿದಂತೆ ಕಡತ, ಸುತ್ತೋಲೆ ಬಂದ ಸಂದರ್ಭದಲ್ಲಿ ಅದನ್ನು ತಿರಸ್ಕರಿಸಿ, ಕನ್ನಡಕ್ಕೆ ಪ್ರಾಧಾನ್ಯತೆ ನೀಡುತ್ತಿದ್ದೆ ಎಂದು ವಿಶ್ರಾಂತ ಐಎಎಸ್ ಅಧಿಕಾರಿ ಡಾ. ಸಿ. ಸೋಮಶೇಖರ್ ಅಭಿಪ್ರಾಯಪಟ್ಟರು.

ನಗರದಲ್ಲಿಂದು ಶೇಷಾದ್ರಿಪುರಂ ಮುಖ್ಯ ಕಾಲೇಜು ಸಭಾಂಗಣದಲ್ಲಿ ಹನುಮಂತರಾಯರ ಅಭಿನಂದನಾ ಸಮಿತಿ ಆಯೋಜಿಸಿದ್ದ, ಕನ್ನಡ ಕಟ್ಟಾಳು ಹನುಮಂತರಾಯರ 60ನೇ ಅಭಿನಂದನಾ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

ಕನ್ನಡಕ್ಕೆ ಆದ್ಯತೆ ನೀಡಬೇಕು ಎನ್ನುವ ನಿಟ್ಟಿನಲ್ಲಿ ಆಂಗ್ಲ ಭಾಷೆಯಲ್ಲಿ ಕೆಲ ಕಡತ, ಸುತ್ತೋಲೆಗಳು ಬರುತ್ತಿದ್ದವು. ಆಗ, ಅದನ್ನು ವಾಪಸ್ಸು ಮಾಡಿ, ಕನ್ನಡದಲ್ಲಿ ತರಿಸಿಕೊಂಡು ಸಹಿ ಮಾಡುತ್ತಿದ್ದೇ. ಇದರಿಂದ, ಕಚೇರಿ ವಲಯದಲ್ಲಿ ಕನ್ನಡಕ್ಕೆ ಪ್ರಾಧಾನ್ಯತೆ ನೀಡಬೇಕು ಎನ್ನುವ ಸಂದೇಶ ಹೋಗುತಿತ್ತು ಎಂದು ಅವರು ಹೇಳಿದರು.

ಕನ್ನಡ ಎನ್ನುವ ಶ್ರೀರಾಮನಿಗೆ, ಹನುಮಂತ ರಾಯರು, ಆಂಜನೇಯರಂತೆಯೇ ಕೆಲಸ ಮಾಡಿದರು ಎಂದ ಅವರು, ಅಧಿಕಾರಿಗಳಲ್ಲಿ, ರಾಜಕಾರಣಿಗಳಲ್ಲಿ ಕನ್ನಡ ಬಗ್ಗೆ ಅಭಿಮಾನ ಇರಬೇಕು. ಅಲ್ಲದೆ, ಕನ್ನಡ ಬೆಳೆಸುವುದು ಮಹಿಳೆ ಮತ್ತು ತಾಯಂದಿರ ಕೈಯಲ್ಲಿದೆ ಎಂದ್ದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಪ್ರತಿ ವ್ಯಕ್ತಿಗೆ ವೃತ್ತಿ, ಪ್ರವೃತ್ತಿ ಇರುತ್ತೆ. ವೃತ್ತಿ ಜೀವನೋಪಾಯಕ್ಕಾಗಿ ದಾರಿಯಾದರೆ, ಪ್ರವೃತ್ತಿ ಸಮಾಜಕ್ಕೆ ಕೊಡುಗೆ ನೀಡಲು ದಾರಿಯಾಗಬೇಕು. ಈ ನಿಟ್ಟಿನಲ್ಲಿ ಕನ್ನಡವನ್ನೇ ಪ್ರವೃತ್ತಿಯನ್ನು ಕನ್ನಡ ವ್ಯಾಗ ಊಡಿಸಿಕೊಂಡು ಹನುಮಂತರಾಯರು ದುಡಿದಿದ್ದಾರೆ ಎಂದರು. ಹಿರಿಯ ಸಾಹಿತಿ ಜಾಣಗೆರೆ ವೆಂಕಟರಾಮಯ್ಯ ಮಾತನಾಡಿ, ಕನ್ನಡ ಸಂಘಟನೆಗಳಲ್ಲಿಯೇ ಭಿನ್ನಾಭಿಪ್ರಾಯ ಹೆಚ್ಚಾಗುತ್ತಿವೆ. ಒಂದು ಸಂಘಟನೆ ಮತ್ತೊಂದು ಸಂಘಟನೆ ಕುರಿತು ತಪ್ಪು ಕಲ್ಪನೆ ಹೊಂದಿದ್ದು, ಕೆಲವೊಮ್ಮೆ ಗಲಾಟೆಗಳು ನಡೆದಿರುವ ಘಟನೆಗಳು ಸಾಕ್ಷಿ ಇವೆ. ಇದು ಬದಲಾದರೆ ಮಾತ್ರ ಕನ್ನಡ ಗಟ್ಟಿಗೊಳಿಸಬೇಕಾಗಿದೆ ಎಂದರು.

ಕನ್ನಡ ಪರ ಹೋರಾಟಗಾರ ವಾಟಾಳ್ ನಾಗರಾಜ್ ಅವರೇ ಒಂದು ಕನ್ನಡ ಬಾವುಟ ವಿನ್ಯಾಸ ಮಾಡಿಕೊಂಡಿದ್ದರು. ಅಲ್ಲದೆ, ಈಗಿನ ಹಳದಿ ಮತ್ತು ಕೆಂಪು ಬಾವುಟವನ್ನು ಹಲವು ದಿನಗಳ ಕಾಲ ದ್ವೇಷಿಸುತ್ತಿದ್ದರು ಎಂದು ಅವರು ಆರೋಪಿಸಿದರು.

ಈ ಸಂದರ್ಭದಲ್ಲಿ ಬಿಬಿಎಂಪಿ ಮಾಜಿ ಮೇಯರ್ ಗಳಾದ ಜೆ.ಹುಚ್ಚಪ್ಪ, ಎಂ.ರಾಮಚಂದ್ರಪ್ಪ, ಪಾಲಿಕೆಯ ಮಾಜಿ ಆಡಳಿತ ಪಕ್ಷದ ನಾಯಕ ಆರ್.ಎಸ್.ಸತ್ಯನಾರಾಯಣ, ಕನ್ನಡ ಸಾಹಿತ್ಯ ಪರಿಷತ್ತಿನ ಬೆಂಗಳೂರು ಅಧ್ಯಕ್ಷ ಮಾಯಣ್ಣ, ಕನ್ನಡ ಪರ ಹೋರಾಟಗಾರ ಕೆ.ನರಸಿಂಹಶೆಟ್ಟಿ, ರು.ಬಸಪ್ಪ ಸೇರಿದಂತೆ ಪ್ರಮುಖರಿದ್ದರು.

ಈ ಸಂಜೆ

03-11-2019



ಶೇಷಾದ್ರಿಪುರಂ ಕಾಲೇಜಿನಲ್ಲಿಂದು ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಕನ್ನಡದ ಕಟ್ಟಾಳು ಹನುಮಂತರಾಯ ಅವರನ್ನು ಅಭಿನಂದಿಸಲಾಯಿತು. ಮಾಜಿ ಮೇಯರ್ ಹುಚ್ಚಪ್ಪ, ನಿವೃತ್ತ ಜಿಲ್ಲಾಧಿಕಾರಿ ಡಾ.ಸಿ.ಸೋಮಶೇಖರ್, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಸಾಹಿತಿ ಜಾಣಗೆರೆ ವೆಂಕಟರಾಮಯ್ಯ, ಬೆಂಗಳೂರು ನಗರ ಜಿಲ್ಲಾ ಕಸಾಪ ಅಧ್ಯಕ್ಷ ಮಾಯಣ್ಣ, ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಟನೆಗಳ ಒಕ್ಕೂಟದ ಅಧ್ಯಕ್ಷ ಎಂ.ತಿಮ್ಮಯ್ಯ ಮತ್ತಿತರರಿದ್ದರು.

ಕರ್ನಾಟಕ ಶನಿವಾರ,26 ಅಕ್ಟೋಬರ್ 2019

# 'ಮೌಲ್ಯಯುತ ಶಿಕ್ಷಣ ಇರಲಿ, ಒತ್ತಡ ಬೇಡ'

ವಿಕ ಸುದ್ದಿಲೋಕ ಬೆಂಗಳೂರು

ಹೆಚ್ಚು ಅಂಕ ಗಳಿಸುವ ಒಂದೇ ಉದ್ದೇಶದಿಂದ ಮಕ್ಕಳು ಓದುವಂತೆ ಪಾಲಕರು ಒತ್ತಡ ಹೇರಬಾರದು. ಮೌಲ್ಯ, ಕೌಶಲ್ಯ ಕಲಿಸಿಕೊಡುವ ಶಿಕ್ಷಣದ ಕಡೆ ಒತ್ತು ನೀಡಬೇಕು ಎಂದು ಪ್ರೌಢಶಿಕ್ಷಣ ಇಲಾಖೆ ನಿರ್ದೇಶಕ ಕೆ.ಎಸ್ ಮಣಿ ಹೇಳಿದರು.

ಸ್ತಂಭ ಇನ್‌ಸ್ಟಿಟ್ಯೂಟ್ ಫಾರ್ ಸ್ಕಿಲ್ಸ್ ಆ್ಯಂಡ್ ವ್ಯಾಲ್ಯು ಎಲ್‌ಎಲ್‌ಪಿ ಮತ್ತು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳು, ಶೇಷಾದ್ರಿಪುರ ಕಾಲೇಜಿನಲ್ಲಿ ಶುಕ್ರವಾರ ಆಯೋಜಿಸಿದ್ದ ''ಹ್ಯಾಪಿ ಗೋ'' ಮಾಸ ಪತ್ರಿಕೆ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

''ಮೌಲ್ಯ ಮತ್ತು ಕೌಶಲ್ಯ ಕಲಿಸಿಕೊಡುವ ಶಿಕ್ಷಣದ ಕಡೆ ಒತ್ತು ನೀಡಿದರೆ ಮಾತ್ರ ಮಕ್ಕಳು ಭವಿಷ್ಯದಲ್ಲಿ ಉತ್ತಮವಾದದ್ದನ್ನು ಸಾಧಿಸಲು ಸಾಧ್ಯವಾಗುತ್ತದೆ. ಪರೀಕ್ಷೆ ಭಯ ಓಡಿಸಿ ಮಕ್ಕಳಲ್ಲಿ ಏಕರೂಪತೆ ಮೂಡಿಸಲು 7ನೇ ತರಗತಿಗೆ ಪಬ್ಲಿಕ್ ಪರೀಕ್ಷೆ ನಡೆಸಲು ಮುಂದಾಗಿದ್ದೇವೆ. ಪಾಲಕರು ಮತ್ತು ಶಿಕ್ಷಕರು ಮಕ್ಕಳಿಗೆ ಮೌಲ್ಯ ಮತ್ತು ಕೌಶಲ್ಯ ಬೆಳೆಸಿಕೊಳ್ಳಲು ಪ್ರೋತ್ಸಾಹ ನೀಡಬೇಕು'' ಮಣಿ ಹೇಳಿದರು.



ಶೇಷಾದ್ರಿಪುರ ಕಾಲೇಜಿನಲ್ಲಿ ಗಣ್ಯರು 'ಹ್ಯಾಪಿ ಗೋ' ಮಾಸಪತ್ರಿಕೆ ಬಿಡುಗಡೆಗೊಳಿಸಿದರು.

ಸ್ತಂಭ ಇನ್‌ಸ್ಟಿಟ್ಯೂಟ್ ಫಾರ್ ಸ್ಕಿಲ್ಸ್ ಆ್ಯಂಡ್ ವ್ಯಾಲ್ಯು ಎಲ್‌ಎಲ್‌ಪಿ ಅಧ್ಯಕ್ಷ ಅರವಿಂದ ಜತ್ತಿ ಮಾತನಾಡಿ, ''ನೈತಿಕ ಮೌಲ್ಯಗಳನ್ನು ವಿದ್ಯಾರ್ಥಿ ದೆಸೆಯಿಂದಲೇ ಬೆಳೆಸಿಕೊಳ್ಳಬೇಕು. ಜ್ಞಾನಾರ್ಜನೆ ಮಾಡುವುದರ ಕಡೆ ಒತ್ತು ನೀಡಬೇಕು,'' ಎಂದರು.

ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಪ್ರಧಾನ ಕಾರ್ಯದರ್ಶಿ ಡಾ.ವುಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ

ಶುಕ್ರವಾರ, 25, ಅಕ್ಟೋಬರ್, 2019

# ಮಹಾತ್ಮಗಾಂಧಿ ವಿಶ್ವಕ್ಕೆ ಮಾದರಿ



ಶೇಷಾದ್ರಿಪುರ ಕಾಲೇಜಿನಲ್ಲಿ ಗುರುವಾರ ಆಯೋಜಿಸಿದ್ದ ಕವನಸಂಕಲನ ಬಿಡುಗಡೆ ಸಮಾರಂಭವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ ಎಸ್.ಜಿ. ಸಿದ್ದರಾಮಯ್ಯ ಉದ್ಘಾಟಿಸಿದರು. ಸ್ವಾತಂತ್ರ್ಯ ಹೋರಾಟಗಾರ್ತಿ ಚನ್ನಮ್ಮ ಹಳ್ಳಿಕೇರಿ, ರಾಜ್ಯಸಭೆ ಮಾಜಿ ಸದಸ್ಯ ಹನುಮಂತಪ್ಪ, ಶೇಷಾದ್ರಿಪುರ ಶಿಕ್ಷಣ ದತ್ತಿ ಗೌರವ ಕಾರ್ಯದರ್ಶಿ ವೂಡೇ ಪಿ ಕೃಷ್ಣ ಮತ್ತಿತರರಿದ್ದರು.

ಸಂ.ಕ.ಸಮಾಚಾರ ಬೆಂಗಳೂರು

ದೇಶಕ್ಕೆ ಸ್ವಾತಂತ್ರ್ಯ ಗಳಿಸಿಕೊಟ್ಟ ಮಹಾತ್ಮಗಾಂಧಿ ದೇಶದಲ್ಲಿ ತಾಂಡವವಾಡುತ್ತಿದ್ದ ಅಸ್ಪೃಶ್ಯತೆ ಹೋಗಲಾಡಿಸಲು ಹೋರಾಟ ನಡೆಸಿ ಇಡೀ ವಿಶ್ವಕ್ಕೆ ಮಾದರಿಯಾದರು ಎಂದು ಸಾಹಿತಿ ಡಾ.ಜಿ.ಎಸ್. ಸಿದ್ದಲಿಂಗಯ್ಯ ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ಕಾಲೇಜಿನಲ್ಲಿ ಏರ್ಪಡಿಸಿದ್ದ ರಾಷ್ಟ್ರಪಿತ ಮಹಾತ್ಮಗಾಂಧಿಯವರ ಜಯಂತಿ ಅಂಗವಾಗಿ ಏರ್ಪಡಿಸಿದ್ದ ಮತ್ತೆ ಮತ್ತೆ ಗಾಂಧಿ ಕವನ ಸಂಕಲನ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ವಿಶ್ವದ ರಾಜಕೀಯ, ಸಾಮಾಜಿಕ ದೃಷ್ಟಿಕೋನದ ವಿಚಾರಗಳನ್ನು ಗಮನಿಸಿದಾಗ ಇಡೀ ಜಗತ್ತಿಗೆ ಗಾಂಧಿಯವರ ತತ್ವಾದರ್ಶಗಳ ಅಗತ್ಯತೆ ಇದೆ. ಅವಮಾನ ಅನುಭವಿಸಿದ, ಹಿಂಸೆ ಅನುಭವಿಸುತ್ತಿರುವ ರಾಷ್ಟ್ರಗಳಲ್ಲಿ ಗಾಂಧಿ ಅವರ ತತ್ವಗಳನ್ನು ಅನುಸರಿಸುತ್ತಿವೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಮಹಾತ್ಮಗಾಂಧಿಯವರ ವಿಚಾರಗಳು ಕೇವಲ ಭಾರತಕ್ಕೆ ಮಾತ್ರವಲ್ಲದೆ ವಿಶ್ವದ ಅನೇಕ ರಾಷ್ಟ್ರಗಳು ಗಾಂಧೀಜಿಯವರು ಪಾಲನೆ ಮಾಡುತ್ತಿದ್ದ ಅಹಿಂಸೆ ತತ್ವವನ್ನು ಅಳವಡಿಸಿಕೊಂಡಿವೆ ಎಂದರಲ್ಲದೆ, ಪರಕೀಯರ ಕಪಿಮುಷ್ಟಿಯಲ್ಲಿ ಸಿಲುಕಿದ್ದ ಭಾರತ ಸ್ವಾತಂತ್ರ್ಯ ಗಳಿಸುವುದು ಸುಲಭದ ಮಾತಾಗಿರಲಿಲ್ಲ. ಇಂತಹ ಕಠಿಣ ಪರಿಸ್ಥಿತಿಯಲ್ಲೂ ಗಾಂಧೀಜಿಯವರು ಸತ್ಯಾಗ್ರಹ, ಅಹಿಂಸೆ ಮಾರ್ಗವನ್ನು ಅನುಸರಿಸಿ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟರು ಎಂದು ಹೇಳಿದರು. ಸ್ವಾತಂತ್ರ್ಯ ಹೋರಾಟಗಾರ್ತಿ ಚನ್ನಮ್ಮ ಹಳ್ಳಿಕೇರಿ, ರಾಜ್ಯಸಭೆ ಮಾಜಿ ಸದಸ್ಯ ಹನುಮಂತಪ್ಪ ಮತ್ತಿತರರಿದ್ದರು.

ಉದಯವಾಣಿ

ಬುಧವಾರ, ಅಕ್ಟೋಬರ್ 16, 2019

# ಎಲ್ಲಾ ಭಾಷೆ ಸಾಹಿತ್ಯ ಕನ್ನಡದಲ್ಲಿ ಸಿಗಲಿ

## 'ನಿನ್ನ ಪ್ರೀತಿಯ ಹಿಂದೆ' ಕೃತಿ ಲೋಕಾರ್ಪಣೆ ವೇಳೆ ಡಾ.ವೂಡೇ ಪಿ.ಕೃಷ್ಣ ಅಭಿಪ್ರಾಯ

ಬೆಂಗಳೂರು: ವಿಶ್ವದ ಎಲ್ಲಾ ಭಾಷೆಯ ಸಾಹಿತ್ಯ ಜ್ಞಾನ ಕನ್ನಡದಲ್ಲಿ ದೊರೆಯುವ ವಾತಾವರಣ ಸೃಷ್ಟಿಯಾಗಬೇಕು ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ಕರ್ನಾಟಕ ಪ್ರತಿಭಾ ಕೇಂದ್ರ ಮಂಗಳವಾರ ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಲೇಖಕ ಡಾ.ಎಸ್. ರಾಮಲಿಂಗೇಶ್ವರ (ಸಿಸಿರಾ)ಅವರ 'ನಿನ್ನ ಪ್ರೀತಿಯ ಹಿಂದೆ' ಕೃತಿ ಲೋಕಾರ್ಪಣೆಗೊಳಿಸಿ ಅವರು ಮಾತನಾಡಿದರು.

ಭಾಷೆ ಸೇರಿದಂತೆ ಹಲವು ವಿಚಾರಗಳಲ್ಲಿ ಚೀನಾ ನಮಗೆ ಮಾದರಿಯಾಗಿದೆ. ಎಲ್ಲಾ ಭಾಷೆಯ ಸಾಹಿತ್ಯ ಚೀನಿ ಭಾಷೆಯಲ್ಲಿ ಸಿಗುತ್ತದೆ. ಯಾವುದೇ ಭಾಷೆಯಲ್ಲಿ ಒಂದು ಉತ್ತಮ ಪುಸ್ತಕ ಪ್ರಕಟವಾದರೂ ಒಂದೇರಡು ದಿನಗಳಲ್ಲಿ ಅದು ಚೀನಿ ಭಾಷೆಯಲ್ಲಿ ಸಿಗುತ್ತದೆ. ಕನ್ನಡದಲ್ಲೂ ಅಂತಹ ವಾತಾವರಣ ಸೃಷ್ಟಿಸಲು ಕನ್ನಡ ಸಾಹಿತ್ಯ ಪರಿಷತ್ತು ಮುಂದಾಗಬೇಕು ಎಂದು ಮನವಿ ಮಾಡಿದರು.

ಸಾಹಿತ್ಯ ಸೇರಿದಂತೆ ಹಲವು ಕ್ಷೇತ್ರಗಳಲ್ಲಿ ಮಹಿಳೆಯರು ಎಲೆಮರೆ ಕಾಯಂತೆ ಗುರುತಿಸಿ-ಗೌರವಿಸುವ ಕಾರ್ಯ ದುಡಿಯುತ್ತಿದ್ದಾರೆ. ಅಂತವರನ್ನು ಆಗಬೇಕಾಗಿದ. ಈ ನಿಟ್ಟಿನಲ್ಲಿ ಸಂಘ-ಸಂಸ್ಥೆಗಳು ಚಿಂತನೆ ನಡೆಸಬೇಕಾಗಿದೆ ಎಂದು ಹೇಳಿದರು.



ಕರ್ನಾಟಕ ಪ್ರತಿಭಾ ಕೇಂದ್ರ ಮಂಗಳವಾರ ಶೇಷಾದ್ರಿಪುರ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಅವರು ಲೇಖಕ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಅವರ 'ನಿನ್ನ ಪ್ರೀತಿಯ ಹಿಂದೆ' ಕೃತಿ ಲೋಕಾರ್ಪಣೆಗೊಳಿಸಿದರು. ಅಂಕಣಕಾರ ಡಾ. ಕೆ.ಪಿ.ಪುತ್ತೂರಾಯ ಇದ್ದಾರೆ.

ಅಂಕಣಕಾರ ಡಾ.ಕೆ.ಪಿ.ಪುತ್ತೂರಾಯ ಮಾತನಾಡಿ, ಕವಿಗೆ ಭಾವ ಭಂಡಾರದ ಜತೆಗೆ ಶಬ್ದ ಭಂಡಾರವೂ ಇರಬೇಕು. ಆಗ ಮಾತ್ರ ಉತ್ತಮವಾದ ಸಾಹಿತಿಯಾಗಿ ಹೊರಹೊಮ್ಮಲು ಸಾಧ್ಯ ಎಂದು ತಿಳಿಸಿದರು.

ಲೇಖಕ ಸಿಸಿರಾ ಅವರ 'ನಿನ್ನ ಪ್ರೀತಿಯ ಹಿಂದೆ' ಕೃತಿಯಲ್ಲಿ ಪರಿಸರ, ಪ್ಲಾಸ್ಟಿಕ್, ಬೆಂಗಳೂರು ಸೇರಿ ಹಲವು ವಿಷಯಗಳು ಅಡಕವಾಗಿವೆ. ಪ್ರೀತಿಯನ್ನು ಹಲವು ರೀತಿಯಲ್ಲಿ ಬಣ್ಣಿಸಿದ್ದಾರೆ. ಕವಿತೆಗಳು ಕೂಡ ಒಂದಕ್ಕೊಂದು ವಿಶಿಷ್ಟವಾಗಿವೆ ಎಂದು ಶ್ಲಾಘಿಸಿದರು.

ಇದೇ ವೇಳೆ ಲೇಖಕ ಸಿಸಿರಾ ಹಾಗೂ ರಾಷ್ಟ್ರಪತಿಗಳ ಯುವ ಸಂಶೋಧಕ ಪ್ರಶಸ್ತಿಗೆ ಭಾಜನರಾದ ಡಾ.ಮಂಜುನಾಥ್ ಪಾಳ್ಯ ದಂಪತಿಯನ್ನು ಸನ್ಮಾನಿಸಲಾಯಿತು. ಕರ್ನಾಟಕ ಪತ್ರಿಭಾ ಕೇಂದ್ರದ ಅಧ್ಯಕ್ಷ ಪಾನ್ಯಂ ನಟರಾಜ್, ಶೇಷಾದ್ರಿಪುರಂ ಸಂಜೆ ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ಎನ್.ಸತೀಶ್ ಮತ್ತಿತರರು ಉಪಸ್ಥಿತರಿದ್ದರು.

ಹೊಸ ದಿಗಂತ

ಬುಧವಾರ
16 ಅಕ್ಟೋಬರ್ 2019

# ಸಾಹಿತ್ಯ ಅಜರಾಮರ: ಡಾ.ಕೆ.ಪಿ.ಪುತ್ತೂರಾಯ

ದಿಗಂತ ವರದಿ, ಬೆಂಗಳೂರು

ಸಾಹಿತಿಗೆ ಸಾವಿದೆ. ಆದರೆ ಸಾಹಿತ್ಯ ಅಜರಾಮರ. ಹಾಗೆಯೇ ಓದಿದವರಿಗೆ ಅರ್ಥವಾಗುವಂತೆ ಬರೆಯುವುದೇ ದೊಡ್ಡ ಸಾಧನೆ. ಅದನ್ನು ಕವಿ ಸಿಸಿರಾ ಅವರು ಮಾಡಿದ್ದಾರೆ ಎಂದು ವಾಗ್ಮಿ ಡಾ.ಕೆ.ಪಿ.ಪುತ್ತೂರಾಯರು ಹೇಳಿದರು.

ನಗರದ ಶೇಷಾದ್ರಿಪುರ ಸಂಜೆ ಪದವಿ ಕಾಲೇಜು ಹಾಗೂ ಕರ್ನಾಟಕ ಪ್ರತಿಭಾ ಕೇಂದ್ರ, ಆಯೋಜಿಸಿದ್ದ ಕವನ ಸಂಕಲನ ಲೋಕಾರ್ಪಣೆ ಹಾಗೂ ಗೌರವಾಭಿನಂದನೆ ಕಾರ್ಯಕ್ರಮದಲ್ಲಿ ಉಪನ್ಯಾಸಕ, ಕವಿ ಡಾ.ಎಸ್.ರಾಮಲಿಂಗಯ್ಯ ರಚಿಸಿದ ನಿನ್ನ ಪ್ರೀತಿಯ ಹಿಂದೆ ಕವನ ಸಂಕಲನ ಲೋಕಾರ್ಪಣೆ ಮಾಡಿ ಅವರು ಮಾತನಾಡಿದರು.

ಪ್ರೀತಿ ಎಂಬ ಪದಕ್ಕೆ ಅದ್ಭುತ ಶಕ್ತಿ, ಸಾಮರ್ಥ್ಯವಿದೆ. ಅದೊಂದು ವಿಶ್ವ ಭಾಷೆ. ಜಾತಿ-ಪಂಥಗಳ ಗೋಡೆಗಳಿಲ್ಲದ್ದು, ನಾನಾ ರೂಪವಿದೆ. ಎಲ್ಲರಿಗೂ ಅರ್ಥವಾಗುವಂಥದ್ದು. ಈ ಪುಸ್ತಕದಲ್ಲಿ ಅದನ್ನು ಓದಿಸಿಕೊಂಡು ಹೋಗುವಂತೆ, ಅರ್ಥವಾಗುವಂತೆ ಸಿಸಿರಾ ರಚಿಸಿದ್ದಾರೆ. ಎಲ್ಲರೂ ಕವಿಯಾಗಲು ಸಾಧ್ಯವಿಲ್ಲ, ಕವಿಯಾಗಬೇಕಿದ್ದವನಿಗೆ ಆಸಕ್ತಿ, ಭಾವ ಭಂಡಾರ, ಶಬ್ದ ಭಂಡಾರ, ವಿಷಯದ ಆಯ್ಕೆಯಲ್ಲಿ ಹಿಡಿತವಿರಬೇಕು. ಅದು ಇವರಲ್ಲಿ ಕಾಣಬಹುದು ಎಂದರು.



ಇಂಗ್ಲಿಷ್‌ನಲ್ಲಿ ಪ್ರಕಟವಾದ ಅತ್ಯುತ್ತಮ ಕೃತಿ, ಸಂಶೋಧಿತ ಲೇಖನ ಸೇರಿದಂತೆ ಒಳ್ಳೆಯ ಅಂಶವನ್ನು ಚೀನಾದವರು ಮೊದಲು ಸ್ಥಳೀಯ ಭಾಷೆಗೆ ಅನುವಾದ ಮಾಡುತ್ತಾರೆ. ಅಂದರೆ ವಿಶ್ವದ ಎಲ್ಲ ಒಳಿತನ್ನೂ ಮಾತೃಭಾಷೆಯಲ್ಲೇ ದೇಶದವರು ಓದಲಿ ಎಂಬ ಗುಣ ಅಲ್ಲಿದೆ. ಅದೇ ರೀತಿ ಕರ್ನಾಟಕದಲ್ಲೂ ಆಗಬೇಕು. ಜಗತ್ತಿನ ಎಲ್ಲ ಸಂಶೋಧಿತ ಕೃತಿಗಳೂ ಕನ್ನಡದಲ್ಲೇ ಪ್ರಕಟವಾಗಬೇಕು. ವಿಜ್ಞಾನ, ತಂತ್ರಜ್ಞಾನ, ಮೊದಲಾದ ವಿಚಾರದಲ್ಲಿ ಕನ್ನಡದಲ್ಲೇ ಸಂಶೋಧನೆ, ಪ್ರಬಂಧ ರಚಿಸುವ ಕೆಲಸ ಮಾಡುವಂತಾಗಬೇಕು ಎಂದು ಶೇಷಾದ್ರಿಪುರ ಶಿಕ್ಷಣ ದತ್ತಿ ಸಂಸ್ಥೆ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಹೇಳಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿ ಸಂಸ್ಥೆ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮಾತನಾಡುತ್ತ, ಬೋಧನೆಯ ಜೊತೆ ಸಂಶೋಧನೆಯೂ ಇರಬೇಕು. ನಿತ್ಯವೂ ಹೊಸತನ್ನು ಕಲಿಯಲು ಸಾಧ್ಯ. ಅಂಥ ವ್ಯಕ್ತಿತ್ವ ರಾಮಲಿಂಗೇಶ್ವರ ಅವರದ್ದು. ಕೃತಿಯಿಂದ ಸರ್ವರ ಮನಸ್ಸನ್ನೂ ಗೆಲ್ಲುವ ಕೆಲಸ ಮಾಡಿದ್ದಾರೆ. ಕವಿ ಸಿಸಿರಾ ಅವರ ನಿರಂತರ ಬರವಣಿಗೆ ಯುವಕರಿಗೆ ಮಾದರಿಯಾಗಬೇಕು ಎಂದರು.

ಇದೇ ಸಂದರ್ಭದಲ್ಲಿ ರಾಷ್ಟ್ರಪತಿಗಳ ಯುವ ಸಂಶೋಧಕ ಪ್ರಶಸ್ತಿ ಪುರಸ್ಕೃತ ಪ್ರಾಧ್ಯಾಪಕ ಡಾ. ಮಂಜುನಾಥ ಪಾಳ್ಯ ದಂಪತಿ ಹಾಗೂ ಸಿಸಿರಾ ದಂಪತಿಗೆ ಗೌರವಿಸಲಾಯಿತು. ಕರ್ನಾಟಕ ಪ್ರತಿಭಾ ಕೇಂದ್ರದ ಅಧ್ಯಕ್ಷ ಪಾಣ್ಯಂ ನಟರಾಜ್, ಸಂಜೆ ಕಾಲೇಜಿನ ಪ್ರಾಂಶುಪಾಲ ಪ್ರೊ. ನೋಟಕಾರ್ ಸತೀಶ್, ಕಾಲೇಜಿನ ನೂರಾರು ವಿದ್ಯಾರ್ಥಿಗಳು ಹಾಜರಿದ್ದರು.

ವಿಶ್ವವಾಣಿ

ಬೆಂಗಳೂರು
06.10.2019 ಭಾನುವಾರ
vishwavani.news

# ವಿವಿಗಳಲ್ಲಿ ಪ್ರಾಯೋಗಿಕ ಪರೀಕ್ಷೆಗೆ ಒತ್ತು

ವಿಶ್ವವಾಣಿ ಸುದ್ದಿಮನೆ ಬೆಂಗಳೂರು

ವಿಶ್ವವಿದ್ಯಾಲಯಗಳಲ್ಲಿ ಪ್ರಾಯೋಗಿಕ ಪರೀಕ್ಷೆಗಳನ್ನು ಹೆಚ್ಚಿಸಿ ವಿದ್ಯಾರ್ಥಿಗಳನ್ನು ಸಮಾಜಮುಖಿಗೊಳಿಸಲು ಚಿಂತನೆ ನಡೆಸಲಾಗುತ್ತಿದೆ ಎಂದು ಉಪಮುಖ್ಯ ಮಂತ್ರಿ ಡಾ. ಸಿ.ಎನ್.ಅಶ್ವತ್ಥನಾರಾಯಣ ಹೇಳಿದರು.

ನಗರದ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಕ್ಯಾಂಪಸ್ ಟು ಕಮ್ಯೂನಿಟಿ ಆಯೋಜಿಸಿದ್ದ 'ಸ್ಕೂಲ್ ಬೆಲ್' ಕಾರ್ಯಕ್ರಮದಲ್ಲಿ ಮಾತನಾಡಿ, ಉನ್ನತ ಶಿಕ್ಷಣದಲ್ಲಿ ಪ್ರಾಯೋಗಿಕ ಪರೀಕ್ಷೆಗಳು ತೀರಾ ಕಡಿಮೆಯಾಗಿವೆ. ಹೀಗಾಗಿ ಇದರ ಅನುಭವ ಗುರಿಗಳೂ ಕಡಿಮೆಯಾಗಿವೆ. ಆದ್ದರಿಂದ ವಿದ್ಯಾರ್ಥಿಗಳನ್ನು ಸಮಾಜಕ್ಕೆ ಉಪಯುಕ್ತವಾಗುವಂತಹ ಪ್ರಾಯೋಗಿಕ ಚಟುವಟಿಕೆಗಳಲ್ಲಿ ತೊಡಗಿಸುವ ಪರೀಕ್ಷೆಗಳನ್ನು ವಿಶ್ವವಿದ್ಯಾಲಯಗಳಲ್ಲಿ ಹೆಚ್ಚಿಸಲಾಗುವುದು ಎಂದು ತಿಳಿಸಿದರು.

ವಿದ್ಯಾರ್ಥಿಗಳು ತಮ್ಮಲ್ಲಿರುವ ಜಡತ್ವ ಬಿಟ್ಟು ನಾನಾ ನೆಲಗಳಲ್ಲಿ ಅಧ್ಯಯನಶೀಲರಾಗಿ ಬದುಕನ್ನು ಸಾರ್ಥಕಗೊಳಿಸಬೇಕು. ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಸಂಸ್ಕೃತಿ, ಕ್ರೀಡೆ, ಅಧ್ಯಾತ್ಮಿಕತೆ ಸೇರಿದಂತೆ ಹಲವು ವಿಚಾರಗಳಿವೆ. ಇದು ಜಾರಿಗೆ ಬಂದರೆ ವಿದ್ಯಾರ್ಥಿಗಳಿಗೆ ಅನುಕೂಲವೇ ಹೆಚ್ಚು. ಸಮಾಜದ ಜವಾಬ್ದಾರಿ ಬಗ್ಗೆ ನಾವಿಂದು ಪುಸ್ತಕದಲ್ಲಿ ಓದುತ್ತಿದ್ದೇವೆ. ಆದರೆ, ಸಾಮಾಜಿಕವಾಗಿ ಭಾಗಿಯಾದಾಗ ಮಾತ್ರ, ಬದಲಾವಣೆ ಕಾಣಲು ಸಾಧ್ಯ. ಮೂಲಸೌಕರ್ಯದ ಬದಲಾಗಿ, ಗುಣ ಮೌಲ್ಯ ಗಳನ್ನು ಹೆಚ್ಚಿಸಬೇಕು ಎಂದರು.



ನಗರದ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಕ್ಯಾಂಪಸ್ ಟು ಕಮ್ಯೂನಿಟಿ ಆಯೋಜಿಸಿದ್ದ 'ಸ್ಕೂಲ್ ಬೆಲ್' ಕಾರ್ಯಕ್ರಮವನ್ನು ಉಪಮುಖ್ಯಮಂತ್ರಿ ಡಾ. ಸಿ.ಎನ್.ಅಶ್ವತ್ಥನಾರಾಯಣ ಉದ್ಘಾಟಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ಸರಕಾರಿ ಶಾಲೆಗಳ ವಾತಾವರಣ, ಮೂಲಸೌಕರ್ಯ ಬದಲಾವಣೆಯು ಮಹಾತ್ಮ ಗಾಂಧೀಜಿ ಅವರ ಕನಸಾಗಿತ್ತು. ಅದೇ ರೀತಿ, ಸ್ವಚ್ಛತೆಗೂ ಅವರು ಆದ್ಯತೆ ನೀಡಿದ್ದರು. ಹಾಗಾಗಿ, ಅವರ ಕನಸು ಮತ್ತು ಗುರಿಗಳನ್ನು ಈಡೇರಿಸುವ ಜವಾಬ್ದಾರಿ ನಮ್ಮ ಮೇಲಿದೆ ಎಂದರು. ಬರಹಗಾರ ಡಾ. ಬಿ.ವಿ.ವಸಂತಕುಮಾರ್, ಎನ್‌ಎಸ್‌ಎಸ್ ರಾಜ್ಯ ಅಧಿಕಾರಿ ಡಾ. ಗಣನಾಥ್ ಶೆಟ್ಟಿ, ಸಂಗೀತಾ ಇತರರು ಇದ್ದರು.

ಸಂಜೆವಾಣಿ

ಶನಿವಾರ, 5 ಅಕ್ಟೋಬರ್ 2019

# ಜಡತ್ವ ತೊರೆಯಿರಿ ಕ್ರಿಯಾಶೀಲರಾಗಿ ವಿದ್ಯಾರ್ಥಿಗಳಿಗೆ ಕಿವಿಮಾತು

ಬೆಂಗಳೂರು, ಅ.5- ಉನ್ನತ ಶಿಕ್ಷಣ ವ್ಯವಸ್ಥೆಯೊಳಗೆ ವಿದ್ಯಾರ್ಥಿಗಳು ಸಮಾಜಮುಖಿಕಾರ್ಯ ಚಟುವಟಿಕೆಗಳಲ್ಲಿ ತೊಡಗುವ ನಿಟ್ಟಿನಲ್ಲಿ 'ಪ್ರಯೋಗಿಕ ಪ್ರಕ್ರಿಯೆ' ವಿಸ್ತರಣೆ ಮಾಡಲಾಗುವುದು ಎಂದು ಉನ್ನತ ಶಿಕ್ಷಣ ಸಚಿವ, ಉಪಮುಖ್ಯಮಂತ್ರಿ ಡಾ.ಅಶ್ವಥ್ ನಾರಾಯಣ ಹೇಳಿದರು.

ನಗರದಲ್ಲಿಂದು ಅರಮನೆ ರಸ್ತೆಯ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಕ್ಯಾಂಪಸ್ ಟು ಕಮ್ಯೂನಿಟಿ ಆಯೋಜಿಸಿದ್ದ, ಸ್ಕೂಲ್ ಬೆಲ್ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

ಉನ್ನತ ಶಿಕ್ಷಣದಲ್ಲಿ ಪ್ರಯೋಗಿಕ ಪರೀಕ್ಷೆಗಳು ತೀರ ಕಡಿಮೆ ಮತ್ತು ಇದರ ಅನುಭವ ಗುರಿಗಳು ಸಹ ಕಡಿಮೆಯಾಗಿವೆ.ಈ ನಿಟ್ಟಿನಲ್ಲಿ ವಿದ್ಯಾರ್ಥಿಗಳನ್ನು ಪ್ರಯೋಗಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ಮೂಲಕ ಸಮಾಜಕ್ಕೆ ಉಪಯುಕ್ತವಾಗುವ ಕೆಲಸಗಳಾಗಬೇಕು. ಹಾಗಾಗಿ,



ನಗರದ ಅರಮನೆ ರಸ್ತೆಯ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಇಂದು ನಡೆದ ಸ್ಕೂಲ್ ಬೆಲ್ ಕಾರ್ಯಕ್ರಮವನ್ನು ಉಪಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥನಾರಾಯಣ ಉದ್ಘಾಟಿಸಿದರು. ಬರಹಗಾರ ಡಾ. ಬಿ.ವಿ. ವಸಂತ ಕುಮಾರ್, ಶೇಷಾದ್ರಿಪುರಂ ಕಾಲೇಜಿನ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ವೂಡೆ ಪಿ. ಕೃಷ್ಣ, ಮತ್ತಿತರರು ಭಾಗವಹಿಸಿದ್ದರು

ವಿಶ್ವವಿದ್ಯಾಲಯಗಳಲ್ಲಿ ಪ್ರಯೋಗಿಕ ಪರೀಕ್ಷೆ ಹೆಚ್ಚಿಸಲಾಗುವುದು ಎಂದು ತಿಳಿಸಿದರು.

ನಮ್ಮಲ್ಲಿ ಅಕಾಡೆಮಿ ಮತ್ತು ಅಂಕಗಳ ಆಧಾರದ ಮೇಲೆ ಕಾಲೇಜುಗಳನ್ನು ಪ್ರವೇಶ ನೀಡುವ ಪದ್ಧತಿ ಚಾಲ್ತಿಯಲ್ಲಿದೆ. ಆದರೆ, ವಿದೇಶಗಳಲ್ಲಿ ಹಾಗಿಲ್ಲ. ಬದಲಾಗಿ, ಶಿಕ್ಷಣದಿಂದ ಸಮಾಜದ ಬದಲಾವಣೆ ಹೇಗೆ ಮಾಡಲಾಗುತ್ತದೆ ಎನ್ನುವುದು ಸಂಶೋಧನೆ ನಡೆಸಿ, ವರದಿ ಸಲ್ಲಿಸಬೇಕು. ಈ ರೀತಿ ನಾವೂ ಅಳವಡಿಸಿಕೊಳ್ಳಬೇಕು ಎಂದರು.

ವಿದ್ಯಾರ್ಥಿಗಳು ತಮ್ಮಲ್ಲಿರುವ ಜಡತ್ವ ಬಿಡುವ ಮೂಲಕ ಕ್ರಿಯಾಶೀಲತೆಯಿಂದ ನಾನಾ ನೆಲೆಗಳಲ್ಲಿ ಅಧ್ಯಯನಶೀಲರಾಗಬೇಕು. ಇದರ ಅನುಸರಣೆಯಿಂದ ತಮ್ಮ ಬದುಕನ್ನು ಸಾರ್ಥಕಗೊಳಿಸಿಕೊಳ್ಳಬೇಕು ಎಂದ ಅವರು, ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಸಂಸ್ಕೃತಿ,ಕ್ರೀಡೆ, ಆಧ್ಯಾತ್ಮಿಕ ಸೇರಿದಂತೆ ಹಲವು ವಿಚಾರಗಳಿವೆ. ಇದು ಜಾರಿಗೆ ಬಂದರೆ, ವಿದ್ಯಾರ್ಥಿಗಳಿಗೆ ಅನುಕೂಲವೇ ಹೆಚ್ಚು ಎಂದು ಹೇಳಿದರು.

ನಾವು ನೀಡುತ್ತೀರುವ ಶಿಕ್ಷಣ, ಸಮಾಜದ ಜವಾಬ್ದಾರಿ ಪುಸ್ತಕದಲ್ಲಿ ಓದುತ್ತಿದ್ದೇವೆ. ಆದರೆ, ಸಾಮಾಜಿಕವಾಗಿ ಭಾಗಿಯಾಗಬೇಕು. ಆಗ ಮಾತ್ರ, ಬದಲಾವಣೆ ಕಾಣಲು ಸಾಧ್ಯವಾಗಿದ್ದು, ಮೂಲಸೌಕರ್ಯ ಬದಲಾಗಿ, ಗುಣ ಮೌಲ್ಯ ಗಳನ್ನು ಹೆಚ್ಚಿಸಬೇಕು ಎಂದು ಅಶ್ವಥ್ ನಾರಾಯಣ ನುಡಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ಸರ್ಕಾರಿ ಶಾಲೆಗಳ ವಾತಾವರಣ, ಮೂಲಸೌಕರ್ಯ ಬದಲಾವಣೆ ಮಹಾತ್ಮ ಗಾಂಧೀಜಿ ಅವರ ಕನಸಾಗಿತ್ತು. ಅದೇ ರೀತಿ, ಸ್ವಚ್ಛತೆಗೂ ಅವರು ಆದ್ಯತೆ ನೀಡಿದ್ದರು. ಹಾಗಾಗಿ, ಅವರ ಕನಸು ಮತ್ತು ಗುರಿಗಳನ್ನು ಈಡೇರಿಸುವ ಜವಾಬ್ದಾರಿ ನಮ್ಮ ಮೇಲಿದೆ ಎಂದು ತಿಳಿಸಿದರು.

ಈ ಸಂದರ್ಭದಲ್ಲಿ ಬರಹಗಾರ ಡಾ.ಬಿ.ವಿ.ವಸಂತಕುಮಾರ್, ಎನ್‌ಎಸ್‌ಎಸ್ ರಾಜ್ಯ ಅಧಿಕಾರಿ ಡಾ.ಗಂಗನಾಥ್ ಶೆಟ್ಟಿ, ಸಂಗೀತಾ ಸೇರಿದಂತೆ ಪ್ರಮುಖರಿದ್ದರು.

ವಾರ್ತಾ ಭಾರತಿ
ಬೆಂಗಳೂರು | ಗುರುವಾರ, ಅಕ್ಟೋಬರ್ 3, 2019

# ದೀನಬಂಧು ಟ್ರಸ್ಟ್‌ಗೆ ಭೂಮಿ ನೀಡಲು ಕ್ರಮ: ಸಿಎಂ

## ಜಿ.ಎಸ್.ಜಯದೇವ್‌ಗೆ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ



ಬೆಂಗಳೂರು, ಅ.2: ಶಿಕ್ಷಣ ಸಂಸ್ಥೆ ವಿಸ್ತೀರ್ಣದ ಉದ್ದೇಶಕ್ಕಾಗಿ ದೀನಬಂಧು ಟ್ರಸ್ಟ್‌ಗೆ ಚಾಮರಾಜನಗರ ಜಿಲ್ಲೆಯಲ್ಲಿ 7 ಎಕರೆ ಭೂಮಿ ನೀಡಲು ಕ್ರಮ ಕೈಗೊಳ್ಳಲಾಗುವುದು ಎಂದು ಮುಖ್ಯಮಂತ್ರಿ ಯಡಿಯೂರಪ್ಪ ಭರವಸೆ ನೀಡಿದ್ದಾರೆ.

ಬುಧವಾರ ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ವಾರ್ತಾ ಮತ್ತು ಸಂಪರ್ಕ ಇಲಾಖೆ ವತಿಯಿಂದ ಆಯೋಜಿಸಿದ್ದ 'ಮಹಾತ್ಮಗಾಂಧಿ ಸೇವಾ ಪ್ರಶಸ್ತಿ-ಕರ್ನಾಟಕ 2019' ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

ದೀನಬಂಧು ಸ್ವಯಂ ಸೇವಾ ಸಂಸ್ಥೆ ಬಡ ಮಕ್ಕಳಿಗೆ ಶಿಕ್ಷಣ ನೀಡುತ್ತಿದೆ. ಅಂತಹ ಸಂಸ್ಥೆಯ ವಿಸ್ತೀರ್ಣದ ಉದ್ದೇಶದಿಂದ ಏಳು ಎಕರೆ ಭೂಮಿ ನೀಡುವಂತೆ 4 ವರ್ಷಗಳಿಂದಲೂ ಪ್ರಯತ್ನಿಸುತ್ತಿದ್ದರೂ, ಯಾರೂ ಈ ಬಗ್ಗೆ ಕ್ರಿಯಾಶೀಲರಾಗಿಲ್ಲ ಎಂಬ ಮಾತು ಕೇಳಿ ನೋವಾಯಿತು ಎಂದು ಅವರು ಹೇಳಿದರು.

ರಾಜ್ಯ ಸರಕಾರಗಳು ಹಲವಾರು ಉದ್ದೇಶಗಳಿಗಾಗಿ ಹಲವಾರು ಜನರಿಗೆ ಭೂಮಿಯನ್ನು ನೀಡಲಾಗುತ್ತಿದೆ. ಆದರೆ, ಶಿಕ್ಷಣದ ಸಂಸ್ಥೆ ಕಟ್ಟುವ ವ್ಯಕ್ತಿಗೆ ನೀಡಿಲ್ಲ ಎಂದರೆ ನಮ್ಮಲ್ಲಿನ ಅಧಿಕಾರಿಗಳು ಕೆಲಸ ಮಾಡುವ ಪದ್ಧತಿ ಅರ್ಥವಾಗುತ್ತದೆ. ಈ ಸಂಬಂಧ ಎರಡು ದಿನಗಳಲ್ಲಿ ಸಂಬಂಧಪಟ್ಟ ದಾಖಲೆಗಳು ತರಿಸಿ ಭೂಮಿ ಮಂಜೂರು ಮಾಡಿಸಿಕೊಡುತ್ತೇನೆ ಎಂದು ನುಡಿದರು.

ಪ್ರಶಸ್ತಿ ಸ್ವೀಕರಿಸಿದ ಬಳಿಕ ಮಾತನಾಡಿದ ಪ್ರೊ.ಜಿ.ಎಸ್.ಜಯದೇವ, ಮಕ್ಕಳಿಗೆ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಿದರೆ ಅವರು ಇಲ್ಲಿನ ನೆಲಮೂಲದ ಸಮಸ್ಯೆಗಳಿಗೆ ಸ್ಪಂದಿಸುತ್ತಾರೆ. ಇಂದಿನ ಮಕ್ಕಳು ತಮ್ಮ ಸ್ಥಳೀಯ ಭಾಷೆಯಲ್ಲಿ ಶಿಕ್ಷಣ ಪಡೆದರೆ ಭಾವನಾತ್ಮಕವಾಗಿ ಪರಿವರ್ತನೆಯಾಗಲು ಸಾಧ್ಯ. ಆದರಿಂದ ಒಳ್ಳೆಯ ಮಾರ್ಗದಲ್ಲಿ ಯೋಚನೆ ಮಾಡಲು ಸಾಧ್ಯವಾಗುತ್ತದೆ ಎಂದರು.

ಕಾರ್ಯಕ್ರಮದಲ್ಲಿ ಪ್ರಶಸ್ತಿ ಆಯ್ಕೆ ಸಮಿತಿ ಅಧ್ಯಕ್ಷ ಹಾಗೂ ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಭೀಮನಗೌಡ ಸಂಗನಗೌಡ ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ವಾರ್ತಾ ಇಲಾಖೆ ಕಾರ್ಯದರ್ಶಿ ಪಂಕಜ್ ಕುಮಾರ್ ಪಾಂಡೆ ಆಯುಕ್ತ ಸಿದ್ದರಾಮಪ್ಪ ಉಪಸ್ಥಿತರಿದ್ದರು.

ನಮ್ಮ ಸಮಾಜದಲ್ಲಿ ಗಾಂಧೀವಾದಿಗಳು ಸಿಗುತ್ತಾರೆ. ಆದರೆ, ನಮಗೆ ಗಾಂಧೀ ಹಾದಿಯಲ್ಲಿ ನಡೆಯುವವರು ಬೇಕಿದೆ. ಮಹಾತ್ಮಾ ಗಾಂಧೀಯನ್ನು ಅವಹೇಳನ ಮಾಡುವವರ ಸಂಖ್ಯೆಯೂ ಅಧಿಕವಾಗುತ್ತಿದೆ. ಇದು ಸರಿಯಲ್ಲ. ಗಾಂಧಿಯ ವಿಚಾರಧಾರೆಗಳನ್ನು ಜೀವಂತವಾಗಿಡಬೇಕು. ಹೀಗಾಗಿ, ರಾಜ್ಯದಲ್ಲಿ ಅವರು ಭೇಟಿ ನೀಡಿದ ಎಲ್ಲ ಸ್ಥಳಗಳನ್ನು ಸಂಕಲ್ಪದ ಸ್ಥಳಗಳಾಗಿ ಪರಿವರ್ತಿಸಿ, ಪ್ರವಾಸ ತಾಣಗಳನ್ನಾಗಿ ಮಾಡಲಾಗುವುದು.

| ಸಿ.ಟಿ.ರವಿ, ಕನ್ನಡ ಮತ್ತು ಸಂಸ್ಕೃತಿ, ಪ್ರವಾಸೋದ್ಯಮ ಇಲಾಖೆ ಸಚಿವ

ವಾರ್ತಾ ಭಾರತಿ

ಬೆಂಗಳೂರು, ಗುರುವಾರ, ಅಕ್ಟೋಬರ್ 3, 2019

# ವಿವಿಗಳಲ್ಲಿ ಗಾಂಧಿ ಅಧ್ಯಯನ ಕೇಂದ್ರ ಸ್ಥಾಪನೆ: ಯಡಿಯೂರಪ್ಪ

ಬೆಂಗಳೂರು, ಅ.2: ತಮ್ಮ ಅಹಿಂಸಾ ಚಿಂತನೆಗಳ ಮೂಲಕ ದೇಶಕ್ಕೆ ಸ್ವಾತಂತ್ರ್ಯ ದೊರಕಿಸಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸಿದ ಮಹಾತ್ಮಾ ಗಾಂಧೀಜಿಯ ಮೌಲ್ಯಗಳನ್ನು ಯುವ ಜನತೆಗೆ ತಲುಪಿಸುವ ನಿಟ್ಟಿನಲ್ಲಿ ರಾಜ್ಯದ ಪ್ರತಿ ವಿಶ್ವವಿದ್ಯಾನಿಲಯದಲ್ಲಿ ಗಾಂಧಿ ಅಧ್ಯಯನ ಕೇಂದ್ರವನ್ನು ತೆರೆಯಲಾಗುವುದು ಎಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ತಿಳಿಸಿದ್ದಾರೆ.

ಬುಧವಾರ ಗಾಂಧಿಭವನದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಸಹಯೋಗದಲ್ಲಿ ಆಯೋಜಿಸಿದ್ದ ಬಾ-ಬಾಪು 150ನೇ ಜನ್ಮ ವರ್ಷಾಚರಣೆ, ರಾಷ್ಟ್ರೀಯ ಸೇವಾ ಯೋಜನೆ ಸುವರ್ಣ ಮಹೋತ್ಸವ ಸಮಾರೋಪದಲ್ಲಿ ಅವರು ಮಾತನಾಡಿದರು.

ಮಾಜಿ ಸಚಿವ ಎಚ್.ಕೆ.ಪಾಟೀಲ್ ಮಾತನಾಡಿ, ಕರ್ನಾಟಕವನ್ನು ಬಯಲು ಬಹಿರ್ದೆಸೆ ಮುಕ್ತ ರಾಜ್ಯವನ್ನು ಮಾಡಲು ಕೇವಲ



ಶೌಚಾಲಯಗಳನ್ನು ಕಟ್ಟಿಸುವುದು ಮಾತ್ರವಲ್ಲ, ಅದನ್ನು ಬಳಸಿ ಪರಿಸರವನ್ನು ಸ್ವಚ್ಛವಾಗಿ ಇಡುವುದು ನಮ್ಮ ಕರ್ತವ್ಯ ಎಂದರು.

ಕಾರ್ಯಕ್ರಮದಲ್ಲಿ ಮೈಲಾರ ಮಹಾದೇವ ಸಭಾಂಗಣ ಮತ್ತು ಗಾಂಧಿ ಪುಸ್ತಕೋತ್ಸವ ಮತ್ತು ವಿಶೇಷ ಛಾಯಾಚಿತ್ರ ಪ್ರದರ್ಶನವನ್ನು ಉದ್ಘಾಟಿಸಲಾಯಿತು. ಗಾಂಧಿ 150 ಮತ್ತು ಗಾಂಧಿ ಭವನ ವಿಶೇಷ ಲಕೋಟೆಯನ್ನು ಲೋಕಾರ್ಪಣೆ ಮಾಡಲಾಯಿತು. ಜೊತೆಗೆ ಜಾನಪದ ಸಾಂಸ್ಕೃತಿಕ ನೃತ್ಯಗಳು ಕಾರ್ಯಕ್ರಮಕ್ಕೆ ಮತ್ತಷ್ಟು ಮೆರಗು ಹೆಚ್ಚಿದವು.

ಈ ವೇಳೆ ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯ ಹೆಚ್ಚುವರಿ ಮಹಾನಿರ್ದೇಶಕ ಎಂ.ನಾಗೇಂದ್ರಸ್ವಾಮಿ, ಪ್ರಧಾನ ಪೋಸ್ಟ್ ಮಾಸ್ಟರ್ ಜನರಲ್ ಚಾರ್ಲ್ಸ್ ಲೋಬೋ, ಸ್ವಾತಂತ್ರ್ಯ ಹೋರಾಟಗಾರ ಸೂ.ರಂ.ರಾಮಯ್ಯ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಧೀನಬಂಧು ಮಕ್ಕಳ ಮನೆ ಸಂಸ್ಥಾಪಕ ಜಿ.ಎಸ್.ಜಯದೇವ ಮತ್ತಿತರರಿದ್ದರು.

> ರಾಜ್ಯದ ಎಲ್ಲ ಜಿಲ್ಲಾ ಕೇಂದ್ರದಲ್ಲಿ ಗಾಂಧಿ ಭವನ ನಿರ್ಮಾಣಕ್ಕೆ ನಿರ್ಣಯ ಕೈಗೊಳ್ಳಲಾಗಿದ್ದು, ಬಳ್ಳಾರಿ, ಮಡಿಕೇರಿ, ಹಾಸನ, ಚಿಕ್ಕಬಳ್ಳಾಪುರದಲ್ಲಿ ಕಟ್ಟಡ ನಿರ್ಮಾಣದ ವಿವಿಧ ಹಂತದಲ್ಲಿದೆ. ಜೊತೆಗೆ 25 ಜಿಲ್ಲೆಗಳಿಗೆ ತಲಾ ರೂ. 3 ಕೋಟಿಯಂತೆ ಒಟ್ಟು 75 ಕೋಟಿಯನ್ನು, 5 ಜಿಲ್ಲೆಗಳಿಗೆ 20 ಲಕ್ಷದಂತೆ 1 ಕೋಟಿ ರೂ.ವನ್ನು ಮಂಜೂರು ಮಾಡಲಾಗಿದೆ.
>
> । ಬಿ.ಎಸ್.ಯಡಿಯೂರಪ್ಪ, ಮುಖ್ಯಮಂತ್ರಿ

ಕನ್ನಡಪ್ರಭ ಗುರುವಾರ 3.10.2019

ಗಾಂಧಿ ಜಯಂತಿ

ಮಾತೃ ಭಾಷೆ ಶಿಕ್ಷಣ ಮಕ್ಕಳ ಅಂತರಂಗ ತಟ್ಟುತ್ತೆ: ಪ್ರೊ. ಜಯದೇವ ಅಭಿಮತ

# ಪ್ರೊ. ಜಯದೇವಗೆ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಇಂಗ್ಲಿಷ್ ಭಾಷಾ ಮಾಧ್ಯಮ ಮಕ್ಕಳಿಗೆ ಕೌಶಲ ಕಲಿಸುತ್ತದೆಯೇ ಹೊರತು ಅದರಿಂದ ಭಾವಪರಿವರ್ತನೆ ಸಾಧ್ಯವಿಲ್ಲ. ಮಾತೃಭಾಷೆಯಿಂದ ಮಾತ್ರ ಮಕ್ಕಳಿಗೆ ಅಂತರಂಗ ತಟ್ಟುವ ಶಿಕ್ಷಣ ನೀಡಲು ಸಾಧ್ಯ ಎಂದು ಗಾಂಧಿ ಚಿಂತಕ ಹಾಗೂ ದೀನಬಂಧು ಟ್ರಸ್ಟ್ ಗೌರವ ಕಾರ್ಯದರ್ಶಿ ಪ್ರೊ. ಜಿ.ಎಸ್.ಜಯದೇವ ಅಭಿಪ್ರಾಯಪಟ್ಟಿದ್ದಾರೆ.

ಬುಧವಾರ ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ರಾಜ್ಯ ಸರ್ಕಾರ ಕೊಡಮಾಡುವ ಪ್ರತಿಷ್ಠಿತ 'ಮಹಾತ್ಮ ಗಾಂಧೀ ಸೇವಾ ಪ್ರಶಸ್ತಿ' ಸ್ವೀಕರಿಸಿ ಮಾತನಾಡಿದ ಅವರು, ಇಂದು ಭಾವಪರಿವರ್ತಿಸುವ ಶಿಕ್ಷಣದ ಅಗತ್ಯವಿದೆ. ಈ ಶಕ್ತಿ ಮಾತೃಭಾಷಾ ಮಾಧ್ಯಮದಲ್ಲಿ ಸಿಗುತ್ತದೆ. ಮಾತೃಭಾಷೆ ಎಂಬುದು ಕೇವಲ ಸಂವಹನ ಸಾಧನವಲ್ಲ, ಬದಲಾಗಿ ಅದೊಂದು ಅಸ್ತ್ರ. ಮಗು ತನ್ನ ನೋವು, ದುಃಖ, ದುಗುಡ ಎಲ್ಲವನ್ನೂ ಸುಲಭವಾಗಿ ವ್ಯಕ್ತಪಡಿಸುತ್ತದೆ. ನೆಲಮೂಲ ಸಂಸ್ಕೃತಿ ಅರಿತು ಪರಿಸ್ಥಿತಿಗೆ ಸ್ಪಂದಿಸುತ್ತದೆ. ಹಾಗಾಗಿ ರಾಜ್ಯದಲ್ಲಿ ಮಾತೃಭಾಷೆ ಕನ್ನಡ ಮಾಧ್ಯಮದಲ್ಲೇ ಶಿಕ್ಷಣ ನೀಡಬೇಕೆಂದು ಒತ್ತಾಯಿಸಿದರು.

ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವ ಸಿ.ಟಿ.ರವಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಕಾರ್ಯದರ್ಶಿ ಪಂಕಜ್ ಕುಮಾರ ಪಾಂಡೆ, ಆಯುಕ್ತ ಎಸ್.ಎನ್. ಸಿದ್ದರಾಮಪ್ಪ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ, ಹೈಕೋರ್ಟ್‌ನ ವಿಶ್ರಾಂತ ನ್ಯಾಯಮೂರ್ತಿ ಭೀಮಾನಗೌಡ ಸಂಗನಗೌಡ ಪಾಟೀಲ್ ಹಲವರಿದ್ದರು.



ನಗರದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ, ಗಾಂಧಿ ಚಿಂತಕ ಪ್ರೊ. ಜಿ.ಎಸ್.ಜಯದೇವರಿಗೆ 'ಮಹಾತ್ಮ ಗಾಂಧೀ ಸೇವಾ ಪ್ರಶಸ್ತಿ' ಪ್ರದಾನ ಮಾಡಿದರು.

## ಜಮೀನು ಮಂಜೂರು ಭರವಸೆ

ಜಿ.ಎಸ್.ಜಯದೇವ ಅವರು ಭಾಷಣದ ವೇಳೆ ಚಾಮರಾಜನಗರದಲ್ಲಿ ತಮ್ಮ ಸಂಸ್ಥೆಗೆ ಏಳು ಎಕರೆ ಜಮೀನು ಮಂಜೂರಾತಿಗೆ ಸರ್ಕಾರಕ್ಕೆ ಮನವಿ ಮಾಡಿದ್ದೇವೆ. ಜಿಲ್ಲಾಡಳಿತ ಸಹ ಜಮೀನು ನೀಡಬಹುದು ಎಂದು ಹೇಳಿದೆ. ಆದರೂ ಕಳೆದ ಏಳು ವರ್ಷಗಳಿಂದ ಕಡತ ವಿಲೇವಾರಿಯಾಗುತ್ತಿಲ್ಲ. ಸಂಸ್ಥೆಯನ್ನು ವಿಸ್ತರಿಸುವ ಅಗತ್ಯವಿದ್ದು, ಈ ಜಮೀನನ್ನು ದೊರಕಿಸಿಕೊಡಬೇಕೆಂದು ಮನವಿ ಮಾಡಿದರು. ಇದನ್ನು ಪ್ರಸ್ತಾಪಿಸಿದ ಬಿ.ಎಸ್.ಯಡಿಯೂರಪ್ಪ ಅವರು, ಮೂರ್ನಾಲ್ಕು ದಿನದಲ್ಲಿ ಆ ಕಡತ ತರಿಸಿ ತ್ವರಿತ ವಿಲೇವಾರಿಗೆ ಕ್ರಮ ವಹಿಸುವ ಭರವಸೆ ನೀಡಿದರು.

೨ ಹೊಸ ದಿಗಂತ
ಗುರುವಾರ, 3 ಅಕ್ಟೋಬರ್ 2019, ಬೆಂಗಳೂರು

### ಗಾಂಧಿ ಕುರಿತು ಅಂತಾರಾಷ್ಟ್ರೀಯ ಸಮ್ಮೇಳನ ನಡೆಸಲು ಸಂಪೂರ್ಣ ಬೆಂಬಲ | ಸಿದ್ಧಾಂತ ಜೀವಂತವಿರಲಿ

# ಗಾಂಧಿ ಚಿಂತನೆಗೆ ತತ್ತ್ವ ಅಧ್ಯಯನ ಕೇಂದ್ರ

ಬೆಂಗಳೂರು: ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಗಾಂಧಿ ಚಿಂತನೆಗ ತತ್ವಗಳನ್ನು ಕುರಿತು ಅಧ್ಯಯನ ಕೇಂದ್ರ ಪ್ರಾರಂಭಿಸಲು ಸೂಚನೆ ನೀಡಲಾಗುವುದು ಎಂದು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ತಿಳಿಸಿದರು.

ಬೆಂಗಳೂರಿನ ಗಾಂಧಿ ಭವನದಲ್ಲಿ ನಡೆದ ಬಾ-ಬಾಪು 150 ನೇ ಜನ್ಮ ವರ್ಷಾಚರಣೆಯಲ್ಲಿ ಮಾತ ನಾಡಿ, ಗಾಂಧಿ ತತ್ವ ಗಳನ್ನು ವಿದ್ಯಾರ್ಥಿ ಅಧ್ಯಯನ ಮಾಡಿ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಗಾಂಧಿ ತತ್ವ ಸಿದ್ಧಾಂತವನ್ನು ಜೀವಂತವಾಗಿಡಲು ಪ್ರಯತ್ನ ಮಾಡಬೇಕು ಎಂದರು.

**ಅಂತಾರಾಷ್ಟ್ರೀಯ ಸಮ್ಮೇಳನಕ್ಕೆ ಬೆಂಬಲ:** ಕರ್ನಾಟಕ ಸರ್ಕಾರ ಪ್ರತಿ ಜಿಲ್ಲೆಯಲ್ಲಿ ಗಾಂಧಿ ಭವನ ನಿರ್ಮಾಣ ಮಾಡಲು ನಿರ್ಣಯ ಕೈಗೊಳ್ಳಲಾಗಿದ್ದು, ಈಗಾಗಲೇ ಬಳ್ಳಾರಿ, ಗುಲ್ಬರ್ಗ, ಮಡಿಕೇರಿ, ಹಾಸನ ಹಾಗೂ ಚಿಕ್ಕಬಳ್ಳಾಪುರದಲ್ಲಿ ನಿರ್ಮಾಣ ಹಂತದಲ್ಲಿರುವ ಕಟ್ಟಡಗಳ ಕಾಮಗಾರಿಯು ಶೀಘ್ರದಲ್ಲೇ ಪೂರ್ಣಗೊಳ್ಳಲಿದೆ. ಇದಕ್ಕಾಗಿ ತಲಾ 20 ಲಕ್ಷದಂತೆ 1 ಕೋಟಿಯನ್ನು ಗಾಂಧಿ ಭವನ ಬಿಡುಗಡೆ ಮಾಡಲಾಗಿದೆ. ಉಳಿದ 25 ಜಿಲ್ಲೆಗಳಿಗೆ ತಲಾ 3 ಕೋಟಿಯಂತೆ 75 ಕೋಟಿ ರುಪಾಯಿಯನ್ನು ಬಿಡುಗಡೆ ಮಾಡಲಾಗಿದೆ. ಈ ಮೂಲಕ ಗಾಂಧೀಜಿ ತತ್ವ ಸಿದ್ಧಾಂತ ಜೀವನವಾಗಿಸಲು ಪ್ರಯತ್ನ ನಡೆಸಲಾಗುತ್ತಿದೆ. ಬೆಂಗಳೂರಿನಲ್ಲಿ ಗಾಂಧೀಜಿ ಅವರ ಕುರಿತು ಅಂತಾರಾಷ್ಟ್ರೀಯ ಸಮ್ಮೇಳನ ನಡೆಸಲು ಸರ್ಕಾರ ಸಂಪೂರ್ಣ ಬೆಂಬಲ ನೀಡಲಿದೆ ಎಂದರು.



ಕಾರ್ಯಕ್ರಮದಲ್ಲಿ ಮೈಲಾರ ಮಹಾದೇವ ಸಭಾಂಗಣ ಮತ್ತು ಗಾಂಧಿ ಪುಸ್ತಕೋತ್ಸವ ಮತ್ತು ವಿಶೇಷ ಛಾಯಾಚಿತ್ರ ಪ್ರದರ್ಶನ ಉದ್ಘಾಟಿಸಲಾಯಿತು. ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಅಕ್ಟೋಬರ್ ವಿಶೇಷ ಸಂಚಿಕೆ ಯೋಜನಾ ಮತ್ತು ಆರ್.ಜಿ.ಮುತಾಲಿಕ ದೇಸಾಯಿ ಅವರ ಹುಕ್ಕೇರಿಯ ರಾಮರಾಯರು, ಜಿ.ಡಿ.ದೇಸಾಯಿ ಅವರ ಮಹಿಳೆಯರು, ಹನುಮಂತರಾವ್ ಮಂಜ್ರೇಕರ್ ಅವರ ನನ್ನ ಬಾಲ್ಯದ ನೆನಪುಗಳು, ಪ್ರಣತಿ ಪ್ರತಾಪ್ ಅವರ ಕಸ್ತೂರಬಾ ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು. ಗಾಂಧಿ 150 ಮತ್ತು ಗಾಂಧಿ ಭವನ ವಿಶೇಷ ಲಕೋಟೆಯನ್ನು ಲೋಕಾರ್ಪಣೆ ಮಾಡಲಾಯಿತು.

ಹೆಚ್ಚುವರಿ ಮಹಾ ನಿರ್ದೇಶಕ ಎಂ. ನಾಗೇಂದ್ರಸ್ವಾಮಿ, ಪ್ರಧಾನ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೋ, ಶಾಸಕ ಎಚ್. ಆರ್. ವಿಶ್ವನಾಥ್, ಜೆ.ಎಸ್. ಜಯದೇವ, ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಸೂ.ರಂ. ರಾಮಯ್ಯ, ಗ್ರಾಮ ಸೇವಾ ಸಂಘದ ಸಂಸ್ಥಾಪಕ ಪ್ರಸನ್ನ ಹೆಗ್ಗೋಡು, ರಾಜ್ಯಸಭಾ ಮಾಜಿ ಸದಸ್ಯ ಎಚ್. ಹನುಮಂತಪ್ಪ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕಿ ಕೆ.ಎಂ.ಜಾನಕಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ಎನ್. ಭೃಂಗೀಶ್, ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ಕೆ.ರೋಹಿಣಿ ಇದ್ದರು.

> ಮನುಕೂಲಕ್ಕೆ ಬಹುದೊಡ್ಡ ಕೊಡುಗೆ ನೀಡುವಲ್ಲಿ ಗಾಂಧಿ ಪಾತ್ರ ಬಹುಮುಖ್ಯವಾಗಿದೆ. ಗಾಂಧಿ ತತ್ವಗಳು ಎಲ್ಲಾ ವಿಶ್ವವಿದ್ಯಾಲಯ ಅಧ್ಯಯನ ಕೇಂದ್ರವನ್ನು ಸರ್ಕಾರ ಪ್ರಾರಂಭಿಸಬೇಕಾಗಿದೆ.
> — ಎಚ್.ಕೆ. ಪಾಟೀಲ್, ಮಾಜಿ ಸಚಿವ

> ಬೆಂಗಳೂರಿನಲ್ಲಿ ಗಾಂಧಿ ಕುರಿತು ಅಂತಾರಾಷ್ಟ್ರೀಯ ಸಮ್ಮೇಳನ ಹಾಗೂ ಗಾಂಧಿ ಸಾಹಿತ್ಯದ ಕುರಿತು ಸಾಹಿತ್ಯ ಸಮ್ಮೇಳನ ನಡೆಸಲು ಸರ್ಕಾರ ಅನುದಾನ ನೀಡಬೇಕು.
> — ಡಾ. ವೂಡೇ.ಪಿ. ಕೃಷ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ

**ಬಯಲು ಬಹಿರ್ದೆಸೆ ಮುಕ್ತ ರಾಜ್ಯ**

ಮಾಜಿ ಸಚಿವ ಎಚ್.ಕೆ ಪಾಟೀಲ್ ಮಾತನಾಡಿ, ಎಲ್ಲರೂ ಗಾಂಧೀಜಿ ತತ್ವ ಸಿದ್ಧಾಂತವನ್ನು ಗೌರವಿಸುವುದರ ಜೊತೆಗೆ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಗಾಂಧೀಜಿ ಅವರ ಕನಸನ್ನು 2018 ನ.19 ಕ್ಕೆ ಬಯಲು ಬಹಿರ್ದೆಸೆಮುಕ್ತ ರಾಜ್ಯವನ್ನಾಗಿ ಮಾಡಲಾಗಿದೆ ಎಂದರು. ಬದುಕು ಹೇಗೆ ಇರಬೇಕು ಎಂದು ಮಾರ್ಗದರ್ಶನ ಮಾಡುವುದರ ಜೊತೆ ಎಲ್ಲರೂ ಶೌಚಾಲಯ ಕಟ್ಟಿಸಿಕೊಳ್ಳಿ ಬಳಸಿಕೊಳ್ಳಿ ಎಂದು ಗಾಂಧೀಜಿ ಕರೆ ನೀಡಿದ್ದರು ಎಂದರು.

ಹೊಸ ದಿಗಂತ
ಗುರುವಾರ, 3 ಅಕ್ಟೋಬರ್ 2019, ಬೆಂಗಳೂರು

# ಕಾಂಗ್ರೆಸ್ ವಿಸರ್ಜಿಸಿ ಎಂದಿದ್ದರು ಗಾಂಧಿ

**ಬೆಂಗಳೂರು:** ಸ್ವಾತಂತ್ರ್ಯಕ್ಕಾಗಿ ಕಟ್ಟಿದ ಕಾಂಗ್ರೆಸ್ ಪಕ್ಷವು ಭವಿಷ್ಯದಲ್ಲಿ ರಾಜಕೀಯವಾಗಿ ದುರುಪಯೋಗವಾಗಬಹುದು. ಸ್ವಾತಂತ್ರ್ಯಾನಂತರ ಕಾಂಗ್ರೆಸ್‌ನ್ನು ವಿಸರ್ಜಿಸಿ ಎಂದು ಅಂದೇ ಮಹಾತ್ಮ ಗಾಂಧೀಜಿ ಹೇಳಿದ್ದರು. ಇದು ದೇಶದ ಕುರಿತಾಗಿ ಅವರ ದೂರದೃಷ್ಟಿ ಎಂದು ಮುಖ್ಯಮಂತ್ರಿ ಬಿ.ಎಸ್ ಯಡಿಯೂರಪ್ಪ ತಿಳಿಸಿದರು.

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ರವೀಂದ್ರ ಕಲಾ ಕ್ಷೇತ್ರದಲ್ಲಿ ಆಯೋಜಿಸಿದ್ದ ಮಹಾತ್ಮಾ ಗಾಂಧೀ ಸೇವಾ ಪ್ರಶಸ್ತಿ ಕರ್ನಾಟಕ-2019 ಸಮಾರಂಭದಲ್ಲಿ ಮಾತನಾಡಿದ ಅವರು, ಪ್ರಧಾನಿ ಮೋದಿಯವರ ಅಪೇಕ್ಷೆಯ ಮೇರೆಗೆ ಗಾಂಧೀಜಿಯವರ 150ನೇ ಜನ್ಮದಿನಾಚರಣೆ ವಿಶ್ವಾದ್ಯಂತ ನಡೆಯುತ್ತಿದೆ. ಗಾಂಧಿ ಹಾದಿಯಲ್ಲಿ ನಾವೆಲ್ಲ ನಡೆದಾಗ ಮಾತ್ರ ಆಚರಣೆ ಸಾರ್ಥಕವೆನಿಸುತ್ತದೆ ಎಂದರು.

**ದೇಶದ ಆತ್ಮ ಗಾಂಧೀಜಿ:** ಸಚಿವ ಸಿ.ಟಿ ರವಿ ಮಾತನಾಡಿ, ಗಾಂಧಿವಾದಿಗಳು ಅನೇಕರಿರುತ್ತಾರೆ. ಆದರೆ ಗಾಧಿ ತತ್ತ್ವ ಅಳವಡಿಕೊಳ್ಳುವವರು ಸಿಗುವುದು ತೀರಾ ವಿರಳ. ಗಾಂಧೀಜಿ ದೇಶದ ಆತ್ಮ. ಗಾಂಧಿಯನ್ನು ಅವಹೇಳನ ಮಾಡುವುದು ದೇಶದ ಆತ್ಮ ಶಕ್ತಿಗೆ ಅವಹೇಳನ ಮಾಡಿದಂತೆ ಗಾಂಧೀಜಿ ವಿಚಾರವನ್ನು ಎಲ್ಲರೂ ಅಳವಡಿಸಿಕೊಳ್ಳುವಂತಾಗಬೇಕು ಎಂದರು.



**ಮಾಹಿತಿ ನೀಡುವ ಕಾರ್ಯ:** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ವಾರ್ತಾ ಇಲಾಖೆ ಹಾಗೂ ಪ್ರವಾಸೋದ್ಯಮ ಇಲಾಖೆ ಸಹಯೋಗದಲ್ಲಿ ವರ್ಷವಿಡೀ ಗಾಂಧೀ ಸಂಬಂಧಿತ ಕಾರ್ಯಕ್ರಮಗಳನ್ನು ಆಯೋಜಿಸಲಾಗುವುದು. ಜೊತೆಗೆ ರಾಜ್ಯದಲ್ಲಿ ಗಾಂಧಿ ಭೇಟಿ ನೀಡಿದ ಸ್ಥಳಗಳಿಗೆ ಶಾಲಾ ಮಕ್ಕಳ ಪ್ರವಾಸ ಹಮ್ಮಿಕೊಂಡು ಅಲ್ಲಿನ ಮಹತ್ವದ ಕುರಿತು ಮಾಹಿತಿ ನೀಡುವ ಕಾರ್ಯ ನಡೆಸಲಾಗುವುದು ಎಂದರು.

**ಗಾಂಧಿ ತತ್ತ್ವ ಅಳವಡಿಕೆ ಮುಖ್ಯ:** ನಿವೃತ್ತ ನ್ಯಾ.ಭೀಮನ ಗೌಡ ಸಂಗನ ಗೌಡ ಪಾಟೀಲ್ ಮಾತನಾಡಿ, ಸರಳ ಮನೋಭಾವದಿಂದ ಸರಳ ಜೀವನ ನಡೆಸಿ, ಸಾರ್ವಜನಿಕ ಸೇವೆ ಮಾಡಿ, ಜೊತೆಗೆ ಗಾಂಧೀಜಿ ತತ್ತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡು, ಜನರಲ್ಲೂ ಅವರ ತತ್ತ್ವ ಅಳವಡಿಕೆಯಾಗಬೇಕು ಎಂಬುದು ಈ ಪ್ರಶಸ್ತಿಯ ಉದ್ದೇಶ ಎಂದರು.

ರಾಷ್ಟ್ರಕವಿ ಶಿವರುದ್ರಪ್ಪನವರ ಪುತ್ರ ಪ್ರೊ.ಜಿ.ಎಸ್ ಜಯದೇವ ಅವರ ನಿಸ್ವಾರ್ಥಸೇವೆ ಪರಿಗಣಿಸಿ ಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ. ಅರ್ಹರಿಗೆ ಇಂತಹ ಪ್ರಶಸ್ತಿ ನೀಡುವುದು ಸಂತಸದ ವಿಚಾರ ಎಂದರು.

ಸಮಾರಂಭದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ.ಪಿ.ಕೃಷ್ಣ, ವಾರ್ತಾ ಇಲಾಖೆ ಕಾರ್ಯದರ್ಶಿ ಪಂಕಜ್ ಕುಮಾರ್ ಪಾಂಡೆ, ಆಯುಕ್ತ ಎನ್.ಎಸ್ ಸಿದ್ದರಾಮಪ್ಪ ಹಾಗೂ ಇನ್ನಿತರ ಗಣ್ಯರು ಉಪಸ್ಥಿತರಿದ್ದರು.

ವಿಶ್ವವಾಣಿ

ಬೆಂಗಳೂರು
03.10.2019 ಗುರುವಾರ
© vishwavani.news

# ಯುವಪೀಳಿಗೆ ಸ್ಮಾರ್ಟ್‌ಫೋನ್ ಗೀಳಿಗೆ ಬಿದ್ದಿರುವುದು ಆತಂಕಕಾರಿ

ಬೆಂಗಳೂರು: ಇಂದಿನ ಡಿಜಿಟಲ್ ಯುಗದಲ್ಲಿ ಯುವಪೀಳಿಗೆ ಸ್ಮಾರ್ಟ್‌ಫೋನ್ ಮತ್ತು ಕಂಪ್ಯೂಟರ್‌ಗಳ ಮೇಲೆ ಹೆಚ್ಚು ಅವಲಂಬಿತರಾಗಿದ್ದು, ಸ್ವಯಂ ವೈಭವೀಕರಣದತ್ತ ವಾಲಿರುವುದು ಆತಂಕಕಾರಿ ಬೆಳವಣಿಗೆ ಎಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಹೇಳಿದರು.

ಗಾಂಧಿಭವನದಲ್ಲಿ ನಡೆದ ಗಾಂಧೀಜಿಯವರ 150ನೇ ಜನ್ಮ ವರ್ಷಾಚರಣೆ, ಮೈಲಾರ ಮಹದೇವಪ್ಪ ಸಭಾಂಗಣ ಉದ್ಘಾಟನೆ, ಗಾಂಧಿ ಪುಸ್ತಕೋತ್ಸವ ಹಾಗೂ ಛಾಯಾಚಿತ್ರ ಪ್ರದರ್ಶನ, ರಾಷ್ಟ್ರೀಯ ಸೇವಾ ಯೋಜನೆಯ ಧ್ವನಿಸುರುಳಿ ಪುಸ್ತಕಗಳ ಬಿಡುಗಡೆ, ಗಾಂಧಿ ಭವನದ ಲಕೋಟೆ ಬಿಡುಗಡೆ ಇತ್ಯಾದಿ ಕಾರ್ಯಕ್ರಮಗಳನ್ನು ಉದ್ಘಾಟಿಸಿ ಮಾತನಾಡಿದರು.

ಯುವಜನತೆ ಹಾದಿ ತಪ್ಪುತ್ತಿರುವ ಸ್ಥಿತಿಯಲ್ಲಿ ಅವರಿಗೆ ರಾಷ್ಟ್ರಪಿತ ಮಹಾತ್ಮಾ ಗಾಂಧಿ ಅವರ ಸಿದ್ಧಾಂತಗಳನ್ನು ನೆನಪಿಸುವ ಅಗತ್ಯವಿದೆ. ಮಹಾತ್ಮ ಗಾಂಧಿಯವರು ಹಿಂದೆಂದಿಗಿಂತಲೂ ಈಗ ಹೆಚ್ಚು ಪ್ರಸ್ತುತರಾಗಿದ್ದಾರೆ. ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಇಂದು ಗಾಂಧೀಜಿಯವರ ಜನ್ಮ ದಿನವನ್ನು ಆಚರಿಸಲಾಗುತ್ತಿದೆ ಎಂದರು.

ರಾಜ್ಯದ ಎಲ್ಲಾ ಜಿಲ್ಲಾ ಭವನ ಕೇಂದ್ರಗಳಲ್ಲಿ ಗಾಂಧಿ ಭವನ ನಿರ್ಮಾಣಕ್ಕೆ ಕ್ರಮ ಕೈಗೊಳ್ಳಲಾಗಿದೆ. ಈಗಾಗಲೇ ಬಳ್ಳಾರಿ, ಮಡಿಕೇರಿ, ಹಾಸನ, ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣದ ಹಂತದಲ್ಲಿವೆ. 25 ಜಿಲ್ಲೆಗಳಿಗೆ ತಲಾ ಮೂರು ಕೋಟಿಯಂತೆ 75 ಕೋಟಿ ರು. ಬಿಡುಗಡೆ ಮಾಡಲಾಗಿದೆ. ಐದು ಜಿಲ್ಲೆಗಳಿಗೆ ತಲಾ 20 ಲಕ್ಷಗಳಂತೆ ಒಂದು ಕೋಟಿ ಬಿಡುಗಡೆ ಮಾಡಲಾಗಿದೆ. ಗಾಂಧಿಯವರ ತತ್ತ್ವಗಳನ್ನು ಜೀವಂತವಾಗಿರಿಸಲು ಸರಕಾರದ ವತಿಯಿಂದ ಕೆಲವು ಜಿಲ್ಲೆಗಳಲ್ಲಿ ಈಗಾಗಲೇ ನಿರ್ಮಾಣದಲ್ಲಿರುವ ಗಾಂಧಿ ಭವನಗಳನ್ನು ಶೀಘ್ರ ಪೂರ್ಣಗೊಳಿಸಿ ಎಲ್ಲಾ 30 ಜಿಲ್ಲೆ ಗಳಲ್ಲಿ ಗಾಂಧಿಭವನ ನಿರ್ಮಾಣಕ್ಕೆ ಶೀಘ್ರ ಕ್ರಮ ಕೈಗೊಂಡು ಹಣ ಬಿಡುಗಡೆ ಮಾಡಲಾಗುವುದು ಎಂದು ಹೇಳಿದರು.

ಬೆಂಗಳೂರಿನಲ್ಲಿ ಕಸ್ತೂರಿ ಬಾ ಹಾಗೂ ಗಾಂಧೀಜಿಯವರ ಅಂತಾರಾಷ್ಟ್ರೀಯ ಸಮ್ಮೇಳನ ಮಾಡಲು ಸರಕಾರ ಅನುದಾನ ಬಿಡುಗಡೆಗೊಳಿಸಲಿದೆ. ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಗಾಂಧೀಜಿಯವರ ಚಿಂತನೆಗಳನ್ನು, ಸಿದ್ಧಾಂತಗಳನ್ನು ಕುರಿತು ಅಧ್ಯಯನ ನಡೆಸಲು ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸಲು ಸೂಚನೆ ನೀಡುವುದಾಗಿ ಭರವಸೆ ನೀಡಿದರು. ಕಾಂಗ್ರೆಸ್‌ನ ಹಿರಿಯ ನಾಯಕ ಎಚ್.ಕೆ.ಪಾಟೀಲ್, ಶಾಸಕ ಎಸ್.ಆರ್. ವಿಶ್ವನಾಥ್, ನಾಗೇಂದ್ರಸ್ವಾಮಿ, ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಹೆಚ್ಚುವರಿ ಮಹಾನಿರ್ದೇಶಕ ನಾಗೇಂದ್ರಸ್ವಾಮಿ, ಪೋಸ್ಟ್ ಮಾರ್ಷಲ್ ಜಾರ್ಜ್ ಲೋಬೋ ಇತರರು ಇದ್ದರು.



ಗಾಂಧಿಭವನದಲ್ಲಿ ಗಾಂಧೀಜಿ ಅವರ ಪ್ರತಿಮೆಗೆ ಸಿಎಂ ಯಡಿಯೂರಪ್ಪ ಮಾಲಾರ್ಪಣೆ ಮಾಡಿ ನಮನ ಸಲ್ಲಿಸಿದರು.

ಗುರುವಾರ 3 ಅಕ್ಟೋಬರ್ 2019
3 OCTOBER 2019

## ಸಿಎಂ ಯಡಿಯೂರಪ್ಪ ಘೋಷಣೆ ಬಾ-ಬಾಪು 150ನೇ ಜನ್ಮ ವರ್ಷಾಚರಣೆ

# ವಿವಿಗಳಲ್ಲಿ ಗಾಂಧಿ ತತ್ವ ಅಧ್ಯಯನ ಕೇಂದ್ರ



ವಿಜಯವಾಣಿ ಚಿತ್ರ

ಗಾಂಧಿ ಸ್ಮಾರಕ ನಿಧಿ ಬುಧವಾರ ಆಯೋಜಿಸಿದ್ದ ಬಾ-ಬಾಪು 150ನೇ ಜನ್ಮ ವರ್ಷಾಚರಣೆಯಲ್ಲಿ ಮಕ್ಕಳ ಮನೆ ದೀನಬಂಧು ಜಿ.ಎಸ್. ಜಯದೇವ ಮತ್ತು ಸ್ವಾತಂತ್ರ್ಯ ಹೋರಾಟಗಾರ ಸೂ.ರಂ. ರಾಮಯ್ಯ ಅವರನ್ನು ಸನ್ಮಾನಿಸಲಾಯಿತು.

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಮಹಾತ್ಮ ಗಾಂಧಿ ತತ್ವ-ಸಿದ್ಧಾಂತಗಳ ಕುರಿತು ಪ್ರಚುರಪಡಿಸಲು ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಗಾಂಧಿ ತತ್ವ ಅಧ್ಯಯನ ಕೇಂದ್ರ ಆರಂಭಿಸಲಾಗುವುದು ಎಂದು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ತಿಳಿಸಿದ್ದಾರೆ.

**ಜಿಲ್ಲಾ ಕೇಂದ್ರಗಳಲ್ಲಿ ಗಾಂಧಿ ಭವನ ಸ್ಥಾಪನೆ**

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಗಾಂಧಿ ಭವನದಲ್ಲಿ ಏರ್ಪಡಿಸಲಾಗಿದ್ದ ಬಾ-ಬಾಪು 150ನೇ ಜನ್ಮ ವರ್ಷಾಚರಣೆ ಮತ್ತು ರಾಷ್ಟ್ರೀಯ ಸೇವಾ ಯೋಜನೆ ಸುವರ್ಣ ಮಹೋತ್ಸವ ಸಮಾರೋಪದಲ್ಲಿ ಮಾತನಾಡಿದರು.

ಈಗಿನ ಯುವ ಪೀಳಿಗೆಗೆ ಗಾಂಧಿ ತತ್ವ, ಸಿದ್ಧಾಂತಗಳನ್ನು ತಿಳಿಸಿಕೊಡುವುದು ಅವಶ್ಯ. ಆ ಕುರಿತು ವಿಶ್ವ ವಿದ್ಯಾಲಯಗಳಿಗೆ ಸೂಚನೆ ನೀಡಲಾಗುತ್ತದೆ ಎಂದರು. ಎಲ್ಲ ಜಿಲ್ಲಾ ಕೇಂದ್ರಗಳಲ್ಲೂ ಗಾಂಧಿ ಭವನ ಸ್ಥಾಪಿಸಲಾಗುತ್ತಿದೆ. 25 ಜಿಲ್ಲೆಗಳಿಗೆ ತಲಾ 3 ಕೋಟಿ ರೂ.ನಂತೆ 75 ಕೋಟಿ ರೂ. ಮತ್ತು 5 ಜಿಲ್ಲೆಗಳಿಗೆ ತಲಾ 20 ಲಕ್ಷ ರೂ.ನಂತೆ 5 ಕೋಟಿ ರೂ. ನೀಡಲಾಗಿದೆ. ಇನ್ನೊಂದು ವರ್ಷದಲ್ಲಿ ಸಾರ್ವಜನಿಕ ಬಳಕೆಗೆ ನೀಡಲಾಗುವುದು ಎಂದರು.

**ಮೋದಿ ಹೊಗಳಿದ ಕಾಂಗ್ರೆಸ್ ಶಾಸಕ:** ಮಾಜಿ ಸಚಿವ ಎಚ್.ಕೆ. ಪಾಟೀಲ್, ಮಹಾತ್ಮ ಗಾಂಧಿ ಸ್ವಚ್ಛತೆ ಕುರಿತು ಜನರಲ್ಲಿ ಅರಿವು ಮೂಡಿಸುವ ಕೆಲಸ ಮಾಡುತ್ತಿದ್ದರು. ಅದರ ಅಂಗವಾಗಿ ಪ್ರಧಾನಿ ನರೇಂದ್ರ ಮೋದಿ ಸ್ವಚ್ಛ ಭಾರತ್ ಅಭಿಯಾನ ಆರಂಭಿಸಿ, ದೇಶವನ್ನು ಬಯಲು ಬಹಿರ್ದೆಸೆಮುಕ್ತವಾಗಿಸಿದ್ದಾರೆ. 2018ರ ನವೆಂಬರ್‌ನಲ್ಲಿ ಕರ್ನಾಟಕ ಬಯಲು ಬಹಿರ್ದೆಸೆಮುಕ್ತ ರಾಜ್ಯವೆಂದು ಘೋಷಣೆಯಾಗಿದೆ. ಅದು ಗಾಂಧಿಯವರಿಗೆ ನಮ್ಮ ಉಡುಗೊರೆ ಎಂದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಹೆಚ್ಚುವರಿ ಮಹಾನಿರ್ದೇಶಕ ಎಂ. ನಾಗೇಂದ್ರಸ್ವಾಮಿ, ಸ್ವಾತಂತ್ರ್ಯ ಹೋರಾಟಗಾರ ಸೂ.ರಂ.ರಾಮಯ್ಯ ಇನ್ನಿತರರಿದ್ದರು.

> ಗಾಂಧಿ ಮತ್ತು ಕಸ್ತೂರ ಬಾಗೆ ಸಂಬಂಧಿಸಿದ ಅಂತಾರಾಷ್ಟ್ರೀಯ ಸಮ್ಮೇಳನ ಮಾಡಲು ಸಲಹೆಗಳು ಬಂದಿವೆ. ಅದಕ್ಕೆ ಬೇಕಾಗುವ ಅನುದಾನವನ್ನು ಸರ್ಕಾರ ನೀಡಲಿದ್ದು, ಗಾಂಧಿಭವನದ ಆಶ್ರಯದಲ್ಲಿಯೇ ಸಮ್ಮೇಳನ ನಡೆಸಲಾಗುತ್ತದೆ.
>
> ಮುಖ್ಯಮಂತ್ರಿ

## ಪುಸ್ತಕಗಳ ಬಿಡುಗಡೆ

ಆರ್.ಜಿ. ಮುತಾಲೀಕ ದೇಸಾಯಿ ಬರೆದ ಹುಕ್ಕೇರಿ ರಾಮರಾಯರು, ಹನುಮಂತರಾವ್ ಮಂಜ್ರೇಕರ್ ಅನುವಾದದ ನನ್ನ ಬಾಲ್ಯದ ನೆನಪುಗಳು ಹಾಗೂ ಪ್ರಣತಿ ಪ್ರತಾಪ್ ಅನುವಾದದ ಕಸ್ತೂರಬಾ ಕೃತಿಗಳನ್ನು ಲೋಕಾರ್ಪಣೆ ಮಾಡಲಾಯಿತು. ಗಾಂಧಿ 150 ಮತ್ತು ಗಾಂಧಿ ಭವನ ವಿಶೇಷ ಅಂಚೆ ಲಕೋಟೆ ಬಿಡುಗಡೆ ಮಾಡಲಾಯಿತು. ಗಾಂಧಿ ಭವನ ಸಭಾಂಗಣಕ್ಕೆ ಮೈಲಾರ ಮಹದೇವ ಸಭಾಂಗಣ ಎಂದು ನಾಮಕರಣ ಮಾಡಲಾಯಿತು.

# ಆಂಗ್ಲ ಮಾಧ್ಯಮ ಶಿಕ್ಷಣ ಬೇಡ

## ಪ್ರೊ.ಜಿ.ಎಸ್. ಜಯದೇವ ಒತ್ತಾಯ । ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ರಾಜ್ಯ ಸರ್ಕಾರ ಆರಂಭಿಸಿರುವ ಸಾವಿರ ಆಂಗ್ಲ ಭಾಷಾ ಮಾಧ್ಯಮ ಶಾಲೆ ಬಗ್ಗೆ ಮರು ಪರಿಶೀಲನೆ ಮಾಡಿ ಮಕ್ಕಳಿಗೆ ಕನ್ನಡ ಮಾಧ್ಯಮದಲ್ಲೇ ಶಿಕ್ಷಣ ನೀಡಬೇಕು. ಮಕ್ಕಳಿಗೆ ಅರ್ಥವಾಗದ ಭಾಷೆಯ ಶಿಕ್ಷಣ ಬೇಡ ಎಂದು ದೀನಬಂಧು ಸಂಪನ್ಮೂಲ ಕೇಂದ್ರದ ಅಧ್ಯಕ್ಷ ಪ್ರೊ.ಜಿ.ಎಸ್. ಜಯದೇವ ಸರ್ಕಾರವನ್ನು ಒತ್ತಾಯಿಸಿದ್ದಾರೆ.

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ರವೀಂದ್ರ ಕಲಾಕ್ಷೇತ್ರದಲ್ಲಿ ಬುಧವಾರ ಆಯೋಜಿಸಿದ್ದ ಮಹಾತ್ಮ ಗಾಂಧಿ ಪ್ರಶಸ್ತಿ ಸೇವಾ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪ್ರಶಸ್ತಿ ಸ್ವೀಕರಿಸಿ ಮಾತನಾಡಿದರು.

ಕಳೆದ ಸರ್ಕಾರ ಒಂದು ಸಾವಿರ ಆಂಗ್ಲ ಮಾಧ್ಯಮ ಶಾಲೆ ತೆರೆದು ತಪ್ಪು ಮಾಡಿದೆ. ಬೆಳವಣಿಗೆಯ ಹಂತದಲ್ಲಿರುವ ಮಕ್ಕಳಿಗೆ ಮಾತೃಭಾಷೆಯಲ್ಲಿ ಅರ್ಥವಾಗುವ ರೀತಿ ಇತರ ಭಾಷೆಯಲ್ಲಿ ಅರ್ಥವಾಗುವುದಿಲ್ಲ. ಕನ್ನಡ ಮಾಧ್ಯಮದಲ್ಲಿ ಓದಿದವರು ದಡ್ಡರಲ್ಲ. ಗಾಂಧಿ ಕೂಡ ಮಾತೃಭಾಷೆ ಶಿಕ್ಷಣ ನೀಡಬೇಕೆಂದು ಒತ್ತಾಯಿಸಿದ್ದರು. ಆಂಗ್ಲ ಭಾಷೆ ಶಿಕ್ಷಣ ನಮ್ಮವರನ್ನು ಗುಲಾಮರನ್ನಾಗಿಸುತ್ತಿದೆ ಎಂದು ಟೀಕಿಸಿದ್ದರು. ಮಕ್ಕಳ ಭವಿಷ್ಯ ಉಜ್ವಲವಾಗಬೇಕಾದಲ್ಲಿ ಕನ್ನಡ ಮಾಧ್ಯಮದಲ್ಲೇ ಶಿಕ್ಷಣ ನೀಡಬೇಕೆಂದರು.

**ಆಂಗ್ಲ ಮಾಧ್ಯಮ ಶಾಲೆಯ ಸಮೀಕ್ಷೆ ನಡೆಯಲಿ**

**ಸಮೀಕ್ಷೆ ಮಾಡಿ:** ರಾಜ್ಯ ಸರ್ಕಾರ ಹಾಲಿ ಆರಂಭಿಸಿರುವ ಒಂದು ಸಾವಿರ ಆಂಗ್ಲ ಮಾಧ್ಯಮ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಕಲಿಕಾ ಗುಣಮಟ್ಟವನ್ನು ಸಮೀಕ್ಷೆ ಮಾಡಬೇಕು. ಅನಂತರ ಸೂಕ್ತ ನಿರ್ಧಾರ ತೆಗೆದುಕೊಳ್ಳಬೇಕು. ನಮ್ಮ ರಾಜ್ಯದ ಪ್ರಾಥಮಿಕ ಶಿಕ್ಷಣದಲ್ಲಿ ಗುಣಮಟ್ಟತೆ ಇಲ್ಲವೆಂದು ಕೇಂದ್ರ ಸರ್ಕಾರ ನಡೆಸಿದ ಸಮೀಕ್ಷೆಯಲ್ಲಿ ದೃಢಪಟ್ಟಿದೆ. ನಾವು ಗುಣಮಟ್ಟ ಶಿಕ್ಷಣ ನೀಡುವ ಕಡೆ ಕಾರ್ಯೋನ್ಮುಖವಾಗಬೇಕಿದೆ. ನಾನು 1ರಿಂದ 10ನೇ ತರಗತಿಯ ಕನ್ನಡ ಮಾಧ್ಯಮ ಶಾಲೆ ನಡೆಸುತ್ತಿದ್ದೇನೆ. ಇಲ್ಲಿ 430 ಮಕ್ಕಳು ವ್ಯಾಸಂಗ ಮಾಡುತ್ತಾರೆ. ಶಿಕ್ಷಣದ ಗುಣಮಟ್ಟ ಮುಖ್ಯವೇ ಹೊರತು ಮಾಧ್ಯಮವಲ್ಲ ಎಂದರು.

ನಾನು ಆಂಗ್ಲ ಭಾಷೆಯ ವಿರೋಧಿ ಅಲ್ಲ. ಮಕ್ಕಳಿಗೆ ನಮ್ಮ ನೆಲದ ಭಾಷೆ, ಸಂಸ್ಕೃತಿ ತಿಳಿಸಿಕೊಡಬೇಕಾಗದ ಅಗತ್ಯತೆ ಇಂದು ಎದುರಾಗಿರುವುದರಿಂದ ಮಾತೃಭಾಷೆ ಶಿಕ್ಷಣ ಮುಖ್ಯ ಎಂಬುದಷ್ಟೇ ನನ್ನ ವಾದ. ನನಗೆ ಸಿಕ್ಕ ಎಲ್ಲ ಪ್ರಶಸ್ತಿಗಿಂತ ಇದು ಪವಿತ್ರ ಮತ್ತು ಪ್ರಮುಖವಾದದ್ದು ಎಂದು ಭಾವಿಸಿದ್ದೇನೆ. ನಾನು ನಡೆಸುತ್ತಿರುವ ಶಾಲೆ ವಿಸ್ತರಿಸಲು ಚಾಮರಾಜನಗರದಲ್ಲಿ 7 ಎಕರೆ ಭೂಮಿ ನೀಡುವಂತೆ ಸರ್ಕಾರಕ್ಕೆ ಆರು ವರ್ಷದ ಹಿಂದೆ ಮನವಿ ಮಾಡಿದ್ದೆ. ಅಲ್ಲಿನ ಜಿಲ್ಲಾಡಳಿತ ಕೂಡ ಜಾಗ ನೀಡುವುದಕ್ಕೆ ಯಾವುದೇ ತೊಡಕಿಲ್ಲವೆಂದು ವರದಿ ನೀಡಿದೆ. ಆದರೆ, ರಾಜ್ಯ ಸರ್ಕಾರ ಮಾತ್ರ ಕಡತ ಮುಂದೂಡುತ್ತಿಲ್ಲ. ಸರ್ಕಾರ ದಯವಿಟ್ಟು ಜಾಗ ಮಂಜೂರು ಮಾಡಿಕೊಡಬೇಕೆಂದು ಮನವಿ ಮಾಡಿದರು.



ದೀನಬಂಧು ಸಂಪನ್ಮೂಲ ಕೇಂದ್ರದ ಅಧ್ಯಕ್ಷ ಜಿ.ಎಸ್. ಜಯದೇವ ಅವರಿಗೆ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ 2019ನೇ ಸಾಲಿನ 'ಮಹಾತ್ಮಾ ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಮಾಡಿದರು. ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಬಿ.ಎಸ್. ಪಾಟೀಲ್, ಸಚಿವ ಸಿ.ಟಿ. ರವಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಇತರರಿದ್ದರು.

ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಮಾತನಾಡಿ, 6 ವರ್ಷದಿಂದ ಸ್ಥಳ ನೀಡುವುದಕ್ಕೆ ಹಿಂದೇಟು ಹಾಕುತ್ತಿದ್ದಾರೆ ಎಂದರೆ ನಮ್ಮ ಅಧಿಕಾರಿಗಳು ಯಾವ ರೀತಿ ಕೆಲಸ ಮಾಡುತ್ತಿದ್ದಾರೆ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಪ್ರಸ್ತಾವನೆಯನ್ನು ತಕ್ಷಣ ತರಿಸಿ ಪರಿಶೀಲನೆ ನಡೆಸಿ ಸ್ಥಳ ದೊರಕಿಸಿಕೊಡುತ್ತೇನೆಂದು ಭರವಸೆ ನೀಡಿದರು.

ಮಹಾತ್ಮ ಗಾಂಧೀ ಸೇವಾ ಪ್ರಶಸ್ತಿಯು 5 ಲಕ್ಷ ರೂ. ನಗದು ಮತ್ತು ಪ್ರಶಸ್ತಿ ಫಲಕವನ್ನು ಒಳಗೊಂಡಿದೆ.

ವಿಶ್ರಾಂತ ನ್ಯಾಯಮೂರ್ತಿ ಭೀಮನಗೌಡ ಸಂಗನಗೌಡ ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಕಾರ್ಯದರ್ಶಿ ಪಂಕಜ್ ಕುಮಾರ್ ಪಾಂಡೆ, ಆಯುಕ್ತ ಸಿದ್ದರಾಮಪ್ಪ ಉಪಸ್ಥಿತರಿದ್ದರು.

ಇಂದು ಗಾಂಧಿವಾದಿಗಳು ಸಿಗುತ್ತಾರೆಯೇ ಹೊರತು ಗಾಂಧಿ ಹಾದಿಯಲ್ಲಿ ನಡೆಯುವವರು ಸಿಗುವುದಿಲ್ಲ. ಹೀಗಾಗಿ ಗಾಂಧಿ ಇದ್ದ ಸ್ಥಳಗಳನ್ನು ಶಾಲಾ ಮಕ್ಕಳಿಗೆ ಪ್ರವಾಸ ಸಂದರ್ಭದಲ್ಲಿ ತೋರಿಸಲು ನಿರ್ಧರಿಸಲಾಗಿದೆ.

।ಸಿ.ಟಿ. ರವಿ
ಪ್ರವಾಸೋದ್ಯಮ ಸಚಿವ

ಕಾಂಗ್ರೆಸ್ ರಾಜಕೀಯ ಪಕ್ಷವಲ್ಲ. ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ಉಪಯೋಗಿಸಿದ ಶಬ್ದ ಕಾಂಗ್ರೆಸ್. ಅದನ್ನು ಪಕ್ಷಕ್ಕೆ ಬಳಕೆ ಮಾಡಿಕೊಳ್ಳಬೇಡಿ ಎಂದರೂ ಅದನ್ನೇ ಬಳಕೆ ಮಾಡಿಕೊಂಡು ಗಾಂಧಿ ಉದ್ದೇಶಕ್ಕೆ ವಿರುದ್ಧವಾಗಿ ನಡೆಯುತ್ತಿದ್ದಾರೆ.

।ಬಿ.ಎಸ್. ಯಡಿಯೂರಪ್ಪ
ಮುಖ್ಯಮಂತ್ರಿ

# ಅಂತರಂಗ ತಟ್ಟುವ ಶಿಕ್ಷಣ ಅಗತ್ಯ



ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ವತಿಯಿಂದ ಆಯೋಜಿಸಿದ್ದ ಗಾಂಧಿಜಯಂತಿ ಕಾರ್ಯಕ್ರಮದಲ್ಲಿ ಪ್ರೊ. ಜಿ.ಎಸ್. ಜಯದೇವ ಅವರಿಗೆ 2019ನೇ ಸಾಲಿನ ಮಹಾತ್ಮಗಾಂಧಿ ಸೇವಾ ಪ್ರಶಸ್ತಿಯನ್ನು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು ಪ್ರದಾನ ಮಾಡಿದರು.

ಸಮಾಜದಲ್ಲಿ ಗಾಂಧೀವಾದಿಗಳು ಸಿಗುತ್ತಾರೆ. ಆದರೆ, ಗಾಂಧೀ ಮಾರ್ಗದಲ್ಲಿ ನಡೆಯುವವರು ವಿರಳವಾಗಿದ್ದಾರೆ. ಹೀಗಾಗಿ ಅವರ ತತ್ವಾದರ್ಶಗಳನ್ನು ಮೈಗೂಡಿಸಿಕೊಂಡು ಅವರ ಹಾದಿಯಲ್ಲಿ ಸಾಗುವವರ ಅಗತ್ಯ ಹೆಚ್ಚಿದೆ. ಇತ್ತೀಚೆಗೆ ಮಹಾತ್ಮ ಗಾಂಧೀಜಿ ಅವರನ್ನು ಅವಹೇಳನ ಮಾಡುವವರ ಸಂಖ್ಯೆಯೂ ಹೆಚ್ಚಾಗುತ್ತಿದ್ದು, ಇದು ಸರಿಯಾದ ಬೆಳವಣಿಗೆಯಲ್ಲ.

–ಸಿ.ಟಿ.ರವಿ, ಸಚಿವ

ಸಂ.ಕ. ಸಮಾಚಾರ ಬೆಂಗಳೂರು

ಮಾತೃ ಭಾಷೆಯಿಂದಷ್ಟೇ ಅಂತರಂಗವನ್ನು ತಟ್ಟುವ ಮತ್ತು ಸ್ಪಂದಿಸುವ ಶಿಕ್ಷಣ ನೀಡಬಹುದಾಗಿದ್ದು ತಕ್ಷಣ ಸ್ಪಂದಿಸುವ ಶಿಕ್ಷಣ ವ್ಯವಸ್ಥೆ ಇಂದಿನ ಅತ್ಯಗತ್ಯ ಎಂದು 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಪುರಸ್ಕೃತರಾದ ಪ್ರೊ. ಜಿ.ಎಸ್. ಜಯದೇವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ರವೀಂದ್ರ ಕಲಾಕ್ಷೇತ್ರದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಅವರು, ತಂತ್ರಜ್ಞಾನ ಪ್ರಭಾವ ಹೆಚ್ಚಾಗಿರುವ ಪ್ರಸ್ತುತ ದಿನಮಾನಗಳಲ್ಲಿ ಮನುಷ್ಯತ್ವ ನಾಶಗೊಳ್ಳುತ್ತಿದೆ ಎಂದು ಖೇದ ವ್ಯಕ್ತಪಡಿಸಿ ಮಾತೃಭಾಷೆಯಲ್ಲಿ ಶಿಕ್ಷಣ ಪಡೆದರೆ ಅದು ಮಕ್ಕಳಿಗೆ ಹೆಚ್ಚು ಆಪ್ತವಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಇಂಗ್ಲಿಷ್ ವ್ಯಾಮೋಹವಿಲ್ಲ. ಹೀಗಾಗಿ ಮಾನವೀಯ ಕಳಕಳಿ ಮತ್ತು ಅಂತರಂಗ ತಟ್ಟುವ ಶಿಕ್ಷಣಕ್ಕೆ ಆದ್ಯತೆ ನೀಡುವತ್ತ ಸರ್ಕಾರ ಗಮನಹರಿಸಬೇಕಿದೆ ಎಂದು ಹೇಳಿದರು.

ಮೈತ್ರಿ ಸರ್ಕಾರದ ಅವಧಿಯಲ್ಲಿ ಸಾವಿರ ಆಂಗ್ಲ ಮಾಧ್ಯಮ ಶಾಲೆ ಆರಂಭಿಸಲು ನಿರ್ಧರಿಸಲಾಗಿದೆ. ಇದನ್ನು ಮರುಪರಿಶೀಲನೆ ಮಾಡಬೇಕೆಂದ ಅವರು, ಹಾಗೆಯೇ ಶಾಲೆಗಳಲ್ಲಿನ ಶಿಕ್ಷಣ ಹಾಗೂ ವಿದ್ಯಾರ್ಥಿ ಗುಣಮಟ್ಟದ ಬಗ್ಗೆಯೂ ಅಧ್ಯಯನ ನಡೆಯಬೇಕೆಂದರು.

ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಮಾತನಾಡಿ, ಚಾಮರಾಜನಗರ ಜಿಲ್ಲೆಯಲ್ಲಿ ದೀನಬಂಧು ಶಿಕ್ಷಣ ಸಂಸ್ಥೆಗೆ ಏಳು ಎಕರೆ ಭೂಮಿ ಒದಗಿಸಲಾಗುವುದು. ಸಂಸ್ಥೆಯು ಬಡ, ಹಿಂದುಳಿದ, ನಿರ್ಗತಿಕ ಮಕ್ಕಳಿಗೆ ಶಿಕ್ಷಣ ಒದಗಿಸುವ ಮೂಲಕ ಉತ್ತಮ ಕಾರ್ಯ ಮಾಡುತ್ತಿದೆ. ಸಂಸ್ಥೆಯು ಭೂಮಿ ಪಡೆಯಲು ನಾಲ್ಕೈದು ವರ್ಷಗಳಿಂದ ಪ್ರಯತ್ನಿಸುತ್ತಿದ್ದರೂ ಜಮೀನು ಮಂಜೂರು ಆಗದಿರುವುದು ನೋವಿನ ಸಂಗತಿ. ತಮ್ಮ ಸರ್ಕಾರ ಆದಷ್ಟು ಬೇಗನೇ ಭೂಮಿ ಮಂಜೂರು ಮಾಡಲಿದೆ ಎಂದರು.

ಗಾಂಧಿ ಚಿಂತಕ ಪ್ರೊ. ಜಿ.ಎಸ್. ಜಯದೇವ ಅವರಿಗೆ ಪ್ರಸಕ್ತ ಸಾಲಿನ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ನೀಡಿ ಗೌರವಿಸಲಾಯಿತು. ಪ್ರಶಸ್ತಿಯು ಐದು ಲಕ್ಷ ರೂ. ನಗದು, ಪ್ರಶಸ್ತಿ ಫಲಕ ಒಳಗೊಂಡಿದೆ.

ಸಮಾರಂಭದಲ್ಲಿ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಆಯ್ಕೆ ಸಮಿತಿ ಅಧ್ಯಕ್ಷ ಹಾಗೂ ನಿವೃತ್ತ ನ್ಯಾಯಮೂರ್ತಿ ಭೀಮನಗೌಡ ಸಂಗನಗೌಡ ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ವಾರ್ತಾ ಇಲಾಖೆಯ ಆಯುಕ್ತ ಎಸ್.ಎನ್. ಸಿದ್ದರಾಮಪ್ಪ, ಕಾರ್ಯದರ್ಶಿ ಪಂಕಜ್‌ಕುಮಾರ್ ಮತ್ತಿತರರಿದ್ದರು.

ಸಂಯುಕ್ತ ಕರ್ನಾಟಕ · ೦3, ಅಕ್ಟೋಬರ್, 2019 । ಗುರುವಾರ



ಗಾಂಧಿಭವನದಲ್ಲಿ ಆಯೋಜಿಸಿದ್ದ ಬಾ-ಬಾಪು 150ನೇ ಜನ್ಮ ವರ್ಷಾಚರಣೆ ಕಾರ್ಯಕ್ರಮದಲ್ಲಿ ಹುಕ್ಕೇರಿಯ ರಾಮರಾಯರು, ಮಹಿಳೆಯರು, ನನ್ನ ಬಾಲ್ಯದ ನೆನಪುಗಳು, ಕಸ್ತೂರಬಾ ಪುಸ್ತಕಗಳನ್ನು ಬಿಡುಗಡೆ ಮಾಡಿದರು. ವೇದಿಕೆಯಲ್ಲಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ, ಮಾಜಿ ಸಚಿವ ಎಚ್.ಕೆ.ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಮತ್ತಿತರರಿದ್ದರು.

# ವಿವಿಗಳಲ್ಲಿ ಗಾಂಧಿ ಅಧ್ಯಯನ ಕೇಂದ್ರ ಆರಂಭಕ್ಕೆ ಚಿಂತನೆ

ಸಂ.ಕ.ಸಮಾಚಾರ ಬೆಂಗಳೂರು

ವಿಶ್ವವಿದ್ಯಾಲಯಗಳಲ್ಲಿ ಗಾಂಧೀಜಿ ಅವರ ಚಿಂತನೆ, ವಿಚಾರಗಳ ಅಧ್ಯಯನ ಅಗತ್ಯವಿದ್ದು, ರಾಜ್ಯದ ಎಲ್ಲಾ ವಿವಿಗಳಲ್ಲಿ ಗಾಂಧಿ ಅಧ್ಯಯನ ಕೇಂದ್ರವನ್ನು ಪ್ರಾರಂಭಿಸಲಾಗುವುದು ಎಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಭರವಸೆ ನೀಡಿದರು.

ಗಾಂಧಿಭವನದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಸಹಯೋಗದಲ್ಲಿ ಆಯೋಜಿಸಿದ್ದ ಬಾ-ಬಾಪು 150ನೇ ಜನ್ಮ ವರ್ಷಾಚರಣೆ, ರಾಷ್ಟ್ರೀಯ ಸೇವಾ ಯೋಜನೆ ಸುವರ್ಣ ಮಹೋತ್ಸವ ಸಮಾರೋಪದಲ್ಲಿ ಅವರು ಮಾತನಾಡಿದರು.

ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರದಲ್ಲಿ ಗಾಂಧಿ ಭವನ ನಿರ್ಮಾಣಕ್ಕೆ ನಿರ್ಣಯ ಕೈಗೊಳ್ಳಲಾಗಿದ್ದು, ಬಳ್ಳಾರಿ, ಮಡಿಕೇರಿ, ಹಾಸನ, ಚಿಕ್ಕಬಳ್ಳಾಪುರದಲ್ಲಿ ಕಟ್ಟಡ ನಿರ್ಮಾಣದ ವಿವಿಧ ಹಂತದಲ್ಲಿವೆ. ಜೊತೆಗೆ 25 ಜಿಲ್ಲೆಗಳಿಗೆ ತಲಾ 3 ಕೋಟಿಯಂತೆ ಒಟ್ಟು 75 ಕೋಟಿಯನ್ನು, 5 ಜಿಲ್ಲೆಗಳಿಗೆ 20 ಲಕ್ಷದಂತೆ 1 ಕೋಟಿ ಹಣವನ್ನು ಮಂಜೂರು ಮಾಡಲಾಗಿದೆ. ಎಂದರು.

ಮಾಜಿ ಸಚಿವ ಎಚ್.ಕೆ.ಪಾಟೀಲ್ ಮಾತನಾಡಿ, ಕರ್ನಾಟಕವನ್ನು ಬಯಲು ಬರ್ಹಿದೆಸೆ ಮುಕ್ತ ರಾಜ್ಯವನ್ನು ಮಾಡಲು ಕೇವಲ ಶೌಚಾಲಯಗಳನ್ನು ಕಟ್ಟಿಸುವುದು ಮಾತ್ರವಲ್ಲ ಅದನ್ನು ಬಳಸಿ ಪರಿಸರವನ್ನು ಸ್ವಚ್ಛವಾಗಿ ಇಡುವುದು ನಮ್ಮ ಕರ್ತವ್ಯ ಎಂದರು.

ಗಾಂಧೀಜಿ ಕೇವಲ ನಮ್ಮ ರಾಷ್ಟ್ರಕ್ಕೆ ಮಾತ್ರ ಸೀಮಿತವಾದವರಲ್ಲ. ಅವರು ಮನುಕುಲಕ್ಕೆ ಆದರ್ಶ ವ್ಯಕ್ತಿ. ಗಾಂಧೀಜಿ ಅವರ ತತ್ವ ಸಿದ್ಧಾಂತಗಳು ವಿಮರ್ಶೆಗೆ ಒಳಪಟ್ಟಿವೆಯೇ ಹೊರತು ಟೀಕೆಗಳಿಗಲ್ಲ. ಇಂದು ಅವರ ಆದರ್ಶ, ಚಿಂತನೆ, ಸಂದೇಶ, ಪ್ರಾಮಾಣಿಕತೆ, ಮಾರ್ಗದರ್ಶನವು ಎಲ್ಲಾ ಕ್ಷೇತ್ರದಲ್ಲಿ ಕಲುಷಿತಗೊಂಡಿದೆ ಇದನ್ನು ಸರಿಪಡಿಸುವ ಅಗತ್ಯವಿದೆ ಎಂದರು.

ಕಾರ್ಯಕ್ರಮದಲ್ಲಿ ಮೈಲಾರ ಮಹಾದೇವ ಸಭಾಂಗಣ ಮತ್ತು ಗಾಂಧಿ ಪುಸ್ತಕೋತ್ಸವ ಮತ್ತು ವಿಶೇಷ ಛಾಯಾಚಿತ್ರ ಪ್ರದರ್ಶನವನ್ನು ಉದ್ಘಾಟಿಸಲಾಯಿತು. ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಅಕ್ಟೋಬರ್ ವಿಶೇಷ ಸಂಚಿಕೆ ಯೋಜನಾ ಮತ್ತು ಆರ್.ಜಿ.ಮುತಾಲೀಕ ದೇಸಾಯಿ ಅವರ ಹುಕ್ಕೇರಿಯ ರಾಮರಾಯರು, ಜಿ.ಡಿ.ದೇಸಾಯಿ ಅವರ ಮಹಿಳೆಯರು, ಹನುಮಂತರಾವ್ ಮಂಜ್ರೇಕರ್ ಅವರ ನನ್ನ ಬಾಲ್ಯದ ನೆನಪುಗಳು, ಪ್ರಣತಿ ಪ್ರತಾಪ್ ಅವರ ಕಸ್ತೂರಬಾ ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು. ಗಾಂಧಿ 150 ಮತ್ತು ಗಾಂಧಿ ಭವನ ವಿಶೇಷ ಲಕೋಟೆಯನ್ನು ಲೋಕಾರ್ಪಣೆ ಮಾಡಲಾಯಿತು. ಜೊತೆಗೆ ಜಾನಪದ ಸಾಂಸ್ಕೃತಿಕ ನೃತ್ಯಗಳು ಕಾರ್ಯಕ್ರಮಕ್ಕೆ ಮತ್ತಷ್ಟು ಮೆರಗು ಹಚ್ಚಿದವು.

ಕಾರ್ಯಕ್ರಮದಲ್ಲಿ ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯ ಹೆಚ್ಚುವರಿ ಮಹಾ ನಿರ್ದೇಶಕ ಎಂ.ನಾಗೇಂದ್ರಸ್ವಾಮಿ, ಪ್ರಧಾನ ಪೋಸ್ಟ್ ಮಾಸ್ಟರ್ ಜನರಲ್ ಚಾರ್ಲ್ಸ್ ಲೋಬೋ. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಸೂ.ರಂ.ರಾಮಯ್ಯ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಧೀನಬಂಧು ಮಕ್ಕಳ ಮನೆ ಸಂಸ್ಥಾಪಕ ಜಿ.ಎಸ್.ಜಯದೇವ ಮತ್ತಿತರರಿದ್ದರು.




ಮಹಾತ್ಮಾ ಗಾಂಧೀಜಿ ಅವರ 150ನೇ ವರ್ಷಾಚರಣೆ ಹಿನ್ನೆಲೆಯಲ್ಲಿ 'ವಿಜಯವಾಣಿ' ಪತ್ರಿಕೆ ವಾರ್ತಾ ಇಲಾಖೆ ಸಹಭಾಗಿತ್ವದಲ್ಲಿ ಹೊರತಂದಿರುವ ಗಾಂಧಿ ಜಯಂತಿ ಪುರವಣಿಯನ್ನು ಗಾಂಧಿ ಭವನದಲ್ಲಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಬಿಡುಗಡೆ ಮಾಡಿದರು. 'ವಿಜಯವಾಣಿ' ವಿಶೇಷ ಹಿರಿಯ ವರದಿಗಾರ ಶಿವಾನಂದ ತಗಡೂರು, ಜಾಹೀರಾತು ವಿಭಾಗದ ಲಿಂಗಯ್ಯ ಕಾಡುದೇವರಮಠ ಮತ್ತು ಶಿವಕುಮಾರ್ ಹಾಜರಿದ್ದರು.

ವಿಶ್ವವಾಣಿ

ಬೆಂಗಳೂರು
03.10.2019 ಗುರುವಾರ
vishwavani.news

# ಫೋಟೋನೂ ಸುದ್ದಿನೇ





ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ವತಿಯಿಂದ ಏರ್ಪಡಿಸಿದ್ದ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಕರ್ನಾಟಕ-2019 ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಯಡಿಯೂರಪ್ಪ ಅವರು ಭಾಗವಹಿಸಿದ್ದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವ ಸಿ.ಟಿ ರವಿ, ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಆಯ್ಕೆ ಸಮಿತಿ ಅಧ್ಯಕ್ಷ ಭೀಮನಗೌಡ ಸಂಗನಗೌಡ ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ, ವಾರ್ತಾ ಇಲಾಖೆಯ ಹಿರಿಯ ಅಧಿಕಾರಿಗಳು ಇದ್ದರು.

ಸಂಜೆವಾಣಿ

ಬುಧವಾರ, 2 ಅಕ್ಟೋಬರ್ 2019

# ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಗಾಂಧಿ ಭವನ ನಿರ್ಮಾಣ

ಬೆಂಗಳೂರು, ಅ. 2– ಮುಂದಿನ ಒಂದೂವರೆ ವರ್ಷದೊಳಗೆ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಗಾಂಧಿ ಭವನ ಕಟ್ಟಡಗಳನ್ನು ನಿರ್ಮಿಸಲಾಗುವುದು.

ಮಹಾತ್ಮಗಾಂಧೀಜಿ, ಕಸ್ತೂರ್ ಬಾ ಅವರ ಕುರಿತು ಅಂತಾರಾಷ್ಟ್ರೀಯ ಸಮ್ಮೇಳನವನ್ನು ನಗರದಲ್ಲಿ ನಡೆಸಲಾಗುವುದು ಎಂದು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು ಇಂದಿಲ್ಲಿ ತಿಳಿಸಿದರು.

ನಗರದ ಗಾಂಧಿ ಭವನದಲ್ಲಿ ಮಹಾತ್ಮ ಗಾಂಧೀಜಿ ಅವರ 150ನೇ ಜನ್ಮವರ್ಷಾಚರಣೆಯ ಅಂಗವಾಗಿ ಆಯೋಜಿಸಲಾಗಿದ್ದ ಛಾಯಾಚಿತ್ರಗಳ ಪ್ರದರ್ಶನವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ನಗರದಲ್ಲಿ ಮಹಾತ್ಮ ಗಾಂಧೀಜಿ ಮತ್ತು ಕಸ್ತೂರ್ ಬಾ ಅವರ ಕುರಿತಾದ ಅಂತಾರಾಷ್ಟ್ರೀಯ ಸಮ್ಮೇಳನ ನಡೆಸಲು ಎಷ್ಟು ಹಣ ಖರ್ಚಾದರೂ ಬಿಡುಗಡೆಗೆ ಹಿಂದೆ – ಮುಂದೆ ನೋಡುವುದಿಲ್ಲ. ಅವರ ಆದರ್ಶ, ಸಂದೇಶಗಳನ್ನು ಪ್ರಸ್ತುತ ಪೀಳಿಗೆಗೆ ತಲುಪಿಸುವುದು ಮುಖ್ಯ ಎಂದು ಅವರು ಹೇಳಿದರು.

ಬಳ್ಳಾರಿ, ಮಡಿಕೇರಿ, ಚಿಕ್ಕಬಳ್ಳಾಪುರ, ಮತ್ತಿತರ ಕಡೆ ಗಾಂಧಿ ಭವನ ನಿರ್ಮಾಣ ಪೂರ್ಣಗೊಂಡಿವೆ. ನಿರ್ಮಾಣ ಹಂತದಲ್ಲಿರುವ 25 ಜಿಲ್ಲೆಗಳಲ್ಲಿ ತಲಾ 3 ಕೋಟಿಯಂತೆ 75 ಕೋಟಿ ರೂ. ಗಳನ್ನು ಬಿಡುಗಡೆ ಮಾಡಲಾಗಿದೆ. 5 ಜಿಲ್ಲೆಗಳಿಗೆ 20 ಲಕ್ಷ ರೂ. ನಂತೆ ಒಂದು ಕೋಟಿ ರೂ. ಗಳನ್ನು ಬಿಡುಗಡೆ ಮಾಡಲಾಗುವುದು ಎಂದು ತಿಳಿಸಿದರು.

ರಾಜ್ಯದ ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲೂ ಗಾಂಧಿ ಜೀವನ ಕುರಿತ ಅಧ್ಯಯನ ಕೇಂದ್ರಗಳನ್ನು ಆರಂಭಿಸುವಂತೆ, ಎಲ್ಲಾ ವಿವಿ ಕುಲಪತಿಗಳಿಗೆ ಇಂದೇ ಸೂಚನೆ ನೀಡಲಿದ್ದೇನೆ ಎಂದು ಅವರು ತಿಳಿಸಿದರು.

ಮೊಬೈಲ್, ಕಂಪ್ಯೂಟರ್ ಯುಗದಲ್ಲಿ ಯುವ ಜನಾಂಗ ಮುಳುಗಿರುವುದು ಆತಂಕಕಾರಿ ಸಂಗತಿ. ಇಂದಿಗೂ ಹೆಚ್ಚು ಪ್ರಸ್ತುತವಾಗಿರುವ ಮಹಾತ್ಮ ಗಾಂಧೀಜಿ ಅವರ ಬದುಕಿನ ಮೌಲ್ಯವನ್ನು ಯುವ ಜನಾಂಗಕ್ಕೆ ತಲುಪಿಸುವುದು ಮುಖ್ಯವಾಗಿದೆ ಎಂದು ಅವರು ತಿಳಿಸಿದರು.

ಮಹಾತ್ಮ ಗಾಂಧೀಜಿ ಅವರನ್ನು ಎಲ್ಲರಿಗೂ ಹತ್ತಿರವಾಗುವಂತೆ ಮಾಡುವಲ್ಲಿ ಸರ್ಕಾರ, ಅಗತ್ಯ ಕ್ರಮ ಕೈಗೊಳ್ಳಲಿದೆ ಎಂದು ಅವರು ತಿಳಿಸಿದರು.

ಮಾಜಿ ಸಚಿವ ಹೆಚ್.ಕೆ. ಪಾಟೀಲ್ ಅವರು ಮಾತನಾಡಿ, ಬಹುತೇಕ ಜಿಲ್ಲೆಗಳಲ್ಲಿ ಗಾಂಧಿ ಭವನ ಕಟ್ಟಡ ಅಪೂರ್ಣಗೊಂಡಿವೆ. ಕೂಡಲೇ ಪೂರ್ಣಗೊಳಿಸಲು ಸರ್ಕಾರ ಕ್ರಮ ಕೈಗೊಳ್ಳಬೇಕು. ಅಧ್ಯಯನ ಕೇಂದ್ರಗಳು ಶಿಸ್ತುಬದ್ಧವಾಗಿ ನಡೆಸಲು ವಿವಿಗಳಿಗೆ ಸೂಚನೆ ನೀಡಬೇಕು ಎಂದು ಮುಖ್ಯಮಂತ್ರಿ ಅವರಲ್ಲಿ ಮನವಿ ಮಾಡಿದರು.

ಪ್ರಸ್ತುತ ಯುಗದಲ್ಲಿ ಮಹಾತ್ಮ ಗಾಂಧೀಜಿ ಅವರ ಭಾವಚಿತ್ರಕ್ಕೆ ತಲೆಬಾಗುತ್ತೇವೆ. ಆದರೆ ಅವರ ತತ್ವ, ಆದರ್ಶಗಳು, ಸಂದೇಶಗಳನ್ನು ಪರಿಪಾಲಿಸುತ್ತಿದ್ದೇವೆ ಎಂದು ಎದೆಮುಟ್ಟಿಕೊಂಡು ಹೇಳುವ ಧೈರ್ಯ ಯಾರಿಗೂ ಇಲ್ಲದಂತಾಗಿದೆ. ಅಂತಹ ಕಲುಷಿತ ವಾತಾವರಣದಲ್ಲಿದ್ದೇವೆ ಎಂದು ಅವರು ವಿಷಾದ ವ್ಯಕ್ತಪಡಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಪ್ರಾಸ್ತಾವಿಕ ಭಾಷಣ ಮಾಡಿ, ನಗರದಲ್ಲಿ ಮಹಾತ್ಮ ಗಾಂಧೀಜಿ ಅವರ ಕುರಿತಂತೆ, ಅಂತಾರಾಷ್ಟ್ರೀಯ ಸಮ್ಮೇಳನ ನಡೆಸಲು ಎಲ್ಲಾ ಅಗತ್ಯ ಸಹಕಾರವನ್ನು ನೀಡಬೇಕು. ಸಾಹಿತ್ಯ ಅಕಾಡೆಮಿ ವತಿಯಿಂದ ಗಾಂಧಿ ಸಾಹಿತ್ಯ ಸಮ್ಮೇಳನವನ್ನು ಕೂಡ ಆಯೋಜಿಸಬೇಕು ಎಂದು ಮನವಿ ಮಾಡಿದರು.

ಈ ಸಂದರ್ಭದಲ್ಲಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು, ಚಾಮರಾಜನಗರದ ದೀನಬಂಧು ಮಕ್ಕಳ ಮನೆಯ ಮುಖ್ಯಸ್ಥ ಜಿ.ಎಸ್. ಜಯದೇವ ಮತ್ತು ಚಿಕ್ಕಬಳ್ಳಾಪುರದ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಸು.ರಂ. ರಾಮಯ್ಯ ಅವರನ್ನು ಸನ್ಮಾನಿಸಿದರು.

ಸಮಾರಂಭದಲ್ಲಿ ಗಾಂಧಿ ಸೇವಾ ಪ್ರಶಸ್ತಿ ಪುರಸ್ಕೃತ, ಗ್ರಾಮಸೇವಾ ಸಂಘದ ಸಂಸ್ಥಾಪಕ ಪ್ರಸನ್ನ ಹೆಗ್ಗೋಡು, ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯ ಹೆಚ್ಚುವರಿ ಮಹಾನಿರ್ದೇಶಕ ಎಂ. ನಾಗೇಂದ್ರಸ್ವಾಮಿ, ಅಂಚೆ ಇಲಾಖೆಯ ಕರ್ನಾಟಕ ವೃತ್ತದ ಪ್ರಧಾನ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೋ, ಮತ್ತಿತರರು ಉಪಸ್ಥಿತರಿದ್ದರು.



ಗಾಂಧಿ ಭವನದಲ್ಲಿಂದು ಏರ್ಪಡಿಸಿದ್ದ ಬಾಪು 150ನೇ ಜನ್ಮ ದಿನಾಚರಣೆ ಅಂಗವಾಗಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರು, ಹಿರಿಯ ಸ್ವಾತಂತ್ರ್ಯ ಹೋರಾಟಗಾರರನ್ನು ಸನ್ಮಾನಿಸಿದರು. ಕಾಂಗ್ರೆಸ್ ಮುಖಂಡ ಎಚ್.ಕೆ.ಪಾಟೀಲ್, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ
ಸೋಮವಾರ | 30 ಸೆಪ್ಟೆಂಬರ್, 2019

# ಮಕ್ಕಳಲ್ಲಿರಲಿ ಸಾಂಸ್ಕೃತಿಕ ಹೃದಯವಂತಿಕೆ

ಸಂ.ಕ. ಸಮಾಚಾರ ಬೆಂಗಳೂರು

ಬದಲಾಗುತ್ತಿರುವ ಆಧುನಿಕ ಹಾಗೂ ತಾಂತ್ರಿಕ ಜಗತ್ತಿನಲ್ಲಿ ಪ್ರತಿಯೊಬ್ಬ ಪಾಲಕರು ಮಕ್ಕಳಲ್ಲಿ ಸಾಂಸ್ಕೃತಿಕ ಹೃದಯವಂತಿಕೆ ಬೆಳೆಸುವ ಅಗತ್ಯವಿದೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಹೇಳಿದರು.

ಗಾಂಧಿ ಭವನದಲ್ಲಿ ಆಯೋಜಿಸಿದ್ದ ಎಸ್.ಆರ್. ಫೌಂಡೇಷನ್ ದಿನಾಚರಣೆ ಹಾಗೂ ಬಾ-ಬಾಪು 150ನೇ ಜನ್ಮ ವರ್ಷಾಚರಣೆ ಉದ್ಘಾಟಿಸಿ ಮಾತನಾಡಿ, ಹಿಂದೆ ಪ್ರತಿ ಮನೆಗಳಲ್ಲಿ ದೇಶಕ್ಕಾಗಿ ಹೋರಾಡಿದ ಮಹಾತ್ಮ ಗಾಂಧಿ, ಭಗತ್ ಸಿಂಗ್, ಕಿತ್ತೂರ ರಾಣಿ ಚನ್ನಮ್ಮ, ಲಾಲ್ ಬಹದ್ದೂರ್ ಶಾಸ್ತ್ರಿ, ಜಾನ್ಸಿ ರಾಣಿ, ಡಾ.ಬಿ.ಆರ್. ಅಂಬೇಡ್ಕರ್, ಸ್ವಾಮಿ ವಿವೇಕಾನಂದ ಅವರಂತ ಮಹನೀಯರ ತತ್ವಾದರ್ಶಗಳನ್ನು ಪಾಲಿಸಲಾಗುತ್ತಿತ್ತು. ಆದರೆ ಇತ್ತೀಚೆಗೆ ಸಂಸ್ಕೃತಿ ಹಾಗೂ ಪರಿಸ್ಥಿತಿ ಬದಲಾಗುತ್ತಿದೆ. ಹೀಗಾಗಿ ಯುವ ಸಮುದಾಯ ನಾಡು-ನುಡಿಗಾಗಿ ಮಡಿದವರ ಬಗ್ಗೆ ತಿಳಿದುಕೊಳ್ಳಲು ನಿರಾಸಕ್ತಿ ತೋರುತ್ತಿದ್ದಾರೆ ಎಂದರು..

ರಮಣಶ್ರೀ ಗ್ರೂಪ್‌ನ ಅಧ್ಯಕ್ಷ ಎಸ್. ಷಡಕ್ಷರಿ ಮಾತನಾಡಿ, ವ್ಯಕ್ತಿ ಸಿಕ್ಕ ಅವಕಾಶ ಹಾಗೂ ಕೆಲಸವನ್ನು ಅತ್ಯಂತ ಶ್ರದ್ಧೆ, ಭಕ್ತಿ ಹಾಗೂ ಪರಿಶ್ರಮದಿಂದ ನಿರ್ವಹಿಸಬೇಕು. ಜೀವನದಲ್ಲಿ ಯಾವುದೇ ಸಂದರ್ಭ ಬಂದರೂ ವಿಚಲಿತರಾಗದೇ ಮಹಾತ್ಮ ಗಾಂಧೀಜಿಯಂತೆ ಬದುಕಬೇಕು. ಜೊತೆಗೆ ಪ್ರೀತಿ, ವಿಶ್ವಾಸ ಹಾಗೂ ವಿನಮ್ರತೆಯಿಂದ ನಡೆದುಕೊಳ್ಳುವ ಮನೋಭಾವನೆ ಬೆಳೆಸಿಕೊಳ್ಳಬೇಕು. ಇದರಿಂದ ಎಲ್ಲವನ್ನು ಸಾಧಿಸಲು ಸಾಧ್ಯವಿದೆ ಎಂದರು.

ಮಕ್ಕಳ ಹೃದ್ರೋಗ ತಜ್ಞೆ ಡಾ. ವಿಜಯಲಕ್ಷ್ಮೀ ಬಾಳೇಕುಂದ್ರಿ ಮಾತನಾಡಿ, ಮಕ್ಕಳು ಆದರ್ಶ ವ್ಯಕ್ತಿಗಳ ಜೀವನ-ಸಾಧನೆಯನ್ನು ಮಾದರಿಯನ್ನಾಗಿಸಿಕೊಂಡು ನಿರಂತರ ಅಧ್ಯಯನ ನಡೆಸಬೇಕು. ಪಾಲಕರು ಮಕ್ಕಳಿಗೆ ನಾಡು, ನುಡಿ, ಕಲೆ, ಸಂಸ್ಕೃತಿ ಬಗ್ಗೆ ಹೆಚ್ಚು ತಿಳಿಸಿಕೊಡುವ ಪ್ರಯತ್ನ ಮಾಡಬೇಕು. ಆಂಗ್ಲ ಮಾಧ್ಯಮದ ವ್ಯಾಮೋಹದಿಂದ ಹೊರಬಂದು ಪಾಲಕರು ಮೊದಲು ಸಮೃದ್ಧ ಕನ್ನಡ ಭಾಷೆ ಕಲಿಸಲು ಪ್ರಮುಖ ಆದ್ಯತೆ ನೀಡಬೇಕು. ಮಹಾತ್ಮ ಗಾಂಧೀಜಿ ಹೇಳಿದಂತೆ ಪ್ರತಿಯೊಬ್ಬರೂ ಸ್ವದೇಶಿ ತತ್ವಕ್ಕೆ ಬದ್ಧರಾಗಿ ನಡೆದುಕೊಳ್ಳಬೇಕು. ಉತ್ತಮ ಆರೋಗ್ಯ, ಶುಚಿತ್ವಕ್ಕೆ ಹೆಚ್ಚು ಗಮನ ಹರಿಸುವ ಮೂಲಕ ದುಶ್ಚಟಗಳಿಂದ ದೂರವಿರಬೇಕು ಎಂದರು.

ಎಸ್.ಆರ್. ಫೌಂಡೇಷನ್‌ನ ಟ್ರಸ್ಟಿ ಆರ್. ನಿಲಾಂಬಿಕಾ, ಜೆ. ನಾಗರಾಜಪ್ಪ, ಕಾರ್ಯದರ್ಶಿ ಡಾ. ಆರ್. ಇಂದಿರಾ, ಖಜಾಂಚಿ ಎಸ್. ಮಹದೇವ್ ಸೇರಿದಂತೆ ಅನೇಕರು ಉಪಸ್ಥಿತರಿದ್ದರು.




ಗಾಂಧಿಭವನದಲ್ಲಿ ಎಸ್.ಆರ್.ಫೌಂಡೇಶನ್ ಆಯೋಜಿಸಿದ್ದ ಬಾ-ಬಾಪು 150ನೇ ಜನ್ಮ ವರ್ಷಾಚರಣೆ ಕಾರ್ಯಕ್ರಮದಲ್ಲಿ ಸಾಮಾನ್ಯ ಜ್ಞಾನ ಪುಸ್ತಕವನ್ನು ಬಿಡುಗಡೆಗೊಳಿಸಲಾಯಿತು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ರಮಣಶ್ರೀ ಗ್ರೂಪ್‌ನ ಅಧ್ಯಕ್ಷ ಎಸ್.ಷಡಕ್ಷರಿ, ಮಕ್ಕಳ ಹೃದಯ ತಜ್ಞೆ ಡಾ.ವಿಜಯಲಕ್ಷ್ಮಿ ಬಾಳೆಕುಂದ್ರಿ ಸೇರಿದಂತೆ ಹಲವರಿದ್ದರು.

ಹೊಸ ದಿಗಂತ

ಸೋಮವಾರ
30 ಸೆಪ್ಟೆಂಬರ್ 2019

## ಮಕ್ಕಳ ಹೃದ್ರೋಗ ತಜ್ಞೆ ಡಾ. ವಿಜಯಲಕ್ಷ್ಮಿ ಬಾಳೇಕುಂದ್ರಿ

# ನಿರಂತರ ಅಧ್ಯಯನ ಸಾಧನೆಗೆ ಸಹಕಾರಿ

**ಬೆಂಗಳೂರು:** ಮಕ್ಕಳು ಆದರ್ಶ ವ್ಯಕ್ತಿಗಳ ಜೀವನ-ಸಾಧನೆಯನ್ನು ಮಾದರಿಯನ್ನಾಗಿಸಿಕೊಂಡು ನಿರಂತರ ಅಧ್ಯಯನ ನಡೆಸಬೇಕು ಎಂದು ಮಕ್ಕಳ ಹೃದ್ರೋಗ ತಜ್ಞೆ ಡಾ. ವಿಜಯಲಕ್ಷ್ಮಿ ಬಾಳೇಕುಂದ್ರಿ ತಿಳಿಸಿದರು.

ಗಾಂಧಿ ಭವನದಲ್ಲಿ ಆಯೋಜಿಸಿದ್ದ ಎಸ್.ಆರ್.ಫೌಂಡೇಷನ್ ದಿನಾಚರಣೆ ಹಾಗೂ ಬಾ-ಬಾಪು 150ನೇ ಜನ್ಮ ವರ್ಷಾಚರಣೆ ಉದ್ಘಾಟಿಸಿ ಮಾತನಾಡಿದರು.

ಪಾಲಕರು ಮಕ್ಕಳಿಗೆ ನಾಡು, ನುಡಿ, ಕಲೆ, ಸಂಸ್ಕೃತಿ ಬಗ್ಗೆ ಹೆಚ್ಚು ತಿಳಿಸಿಕೊಡುವ ಪ್ರಯತ್ನ ಮಾಡಬೇಕು. ಆಂಗ್ಲ ಮಾಧ್ಯಮದ ವ್ಯಾಮೋಹದಿಂದ ಹೊರಬಂದು ಪಾಲಕರು ಮೊದಲು ಸಮೃದ್ಧ ಕನ್ನಡ ಭಾಷೆ ಕಲಿಸಲು ಪ್ರಮುಖ ಆದ್ಯತೆ ನೀಡಬೇಕು. ಮಹಾತ್ಮ ಗಾಂಧೀಜಿ ಹೇಳಿದಂತೆ ಪ್ರತಿಯೊಬ್ಬರೂ ಸ್ವದೇಶಿ ತತ್ವಕ್ಕೆ ಬದ್ಧರಾಗಿ ನಡೆದುಕೊಳ್ಳಬೇಕು. ಉತ್ತಮ ಆರೋಗ್ಯ, ಚಿತ್ತಕ್ಕೆ ಹೆಚ್ಚು ಗಮನ ಹರಿಸುವ ಮೂಲಕ ದುಶ್ಚಟಗಳಿಂದ ದೂರವಿರಬೇಕು ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೊಡೇ ಪಿ. ಕೃಷ್ಣ ಮಾತನಾಡಿ, ಬದಲಾಗುತ್ತಿರುವ ಆಧುನಿಕ ಹಾಗೂ ತಾಂತ್ರಿಕ ಜಗತ್ತಿನಲ್ಲಿ ಪ್ರತಿಯೊಬ್ಬ ಪಾಲಕರು ಮಕ್ಕಳಲ್ಲಿ ಸಾಂಸ್ಕೃತಿಕ ಹೃದಯವಂತಿಕೆ ಬೆಳೆಸುವ ಅಗತ್ಯವಿದೆ. ಹಿಂದೆ ಪ್ರತಿ ಮನೆಗಳಲ್ಲಿ ದೇಶಕ್ಕಾಗಿ ಹೋರಾಡಿದ ಮಹಾತ್ಮ ಗಾಂಧಿ, ಭಗತ್ ಸಿಂಗ್, ಕಿತ್ತೂರ ರಾಣಿ ಚನ್ನಮ್ಮ, ಲಾಲ್ ಬಹದ್ದೂರ್ ಶಾಸ್ತ್ರಿ, ಜಾನ್ಸಿ ರಾಣಿ, ಡಾ.ಬಿ.ಆರ್. ಅಂಬೇಡ್ಕರ್, ಸ್ವಾಮಿ ವಿವೇಕಾನಂದ ಅವರಂತ ಮಹನೀಯರ ತತ್ವಾದರ್ಶಗಳನ್ನು ಪಾಲಿಸಲಾಗುತ್ತಿತ್ತು. ಆದರೆ ಇತ್ತೀಚೆಗೆ ಸಂಸ್ಕೃತಿ ಹಾಗೂ ಪರಿಸ್ಥಿತಿ ಬದಲಾಗುತ್ತಿದೆ. ಹೀಗಾಗಿ ಯುವ ಸಮುದಾಯ ನಾಡು-ನುಡಿಗಾಗಿ ಮಡಿದವರ ಬಗ್ಗೆ ತಿಳಿದುಕೊಳ್ಳಲು ನಿರಾಸಕ್ತಿ ತೋರುತ್ತಿದ್ದಾರೆ ಎಂದರು.

ಎಸ್.ಆರ್. ಫೌಂಡೇಷನ್ ಟ್ರಸ್ಟಿ ಆರ್. ನಿಲಾಂಬಿಕಾ, ಜೆ.ನಾಗರಾಜಪ್ಪ, ಕಾರ್ಯದರ್ಶಿ ಡಾ. ಆರ್. ಇಂದಿರಾ, ಖಜಾಂಚಿ ಎನ್. ಮಹದೇವ್ ಉಪಸ್ಥಿತರಿದ್ದರು.




**ವ್ಯಕ್ತಿ ಸಿಕ್ಕ ಅವಕಾಶ ಹಾಗೂ ಕೆಲಸವನ್ನು ಅತ್ಯಂತ ಶ್ರದ್ಧೆ ಭಕ್ತಿ ಹಾಗೂ ಪರಿಶ್ರಮದಿಂದ ನಿರ್ವಹಿಸಬೇಕು. ಜೀವನದಲ್ಲಿ ಯಾವುದೇ ಸಂದರ್ಭ ಬಂದರೂ ವಿಚಲಿತರಾಗದೇ ಮಹಾತ್ಮ ಗಾಂಧೀಜಿಯಂತೆ ಬದುಕಬೇಕು**

**ಎಸ್. ಷಡಕ್ಷರಿ, ರಮಣ ಶ್ರೀ ಗ್ರೂಪ್ ಅಧ್ಯಕ್ಷ**

ಭಾನುವಾರ
29 ಸೆಪ್ಟಂಬರ್, 2019




ಎಸ್.ಆರ್.ಫೌಂಡೇಷನ್ ವತಿಯಿಂದ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಬಾ ಬಾಪು 150ನೆ ಜನ್ಮ ದಿನಾಚರಣೆ ಕಾರ್ಯಕ್ರಮದಲ್ಲಿ ಪುಸ್ತಕ ಬಿಡುಗಡೆ ಮಾಡಲಾಯಿತು. ರಮಣಶ್ರೀ ಗ್ರೂಪ್‌ನ ಅಧ್ಯಕ್ಷ ಎಸ್.ಷಡಕ್ಷರಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೆ.ಪಿ.ಕೃಷ್ಣ, ಮಕ್ಕಳ ಹೃದ್ರೋಗ ತಜ್ಞೆ ಡಾ.ವಿಜಯಲಕ್ಷ್ಮಿ ಬಾಳೇಕುಂದ್ರಿ, ಗಾಯಕ ಸಿದ್ದರಾಮ್ ಕೇಶಾಪುರ, ಫೌಂಡೇಷನ್‌ನ ನೀಲಾಂಬಿಕಾ, ಡಾ.ಆರ್.ಇಂದಿರಾ, ಎನ್.ಮಹದೇವ್, ರೆಡ್‌ಕ್ರಾಸ್‌ನ ರಾಜೀವ್ ಚಂದ್ರಶೇಖರ್ ಮತ್ತಿತರರು ಪಾಲ್ಗೊಂಡಿದ್ದರು.

ಸಂಯುಕ್ತ ಕರ್ನಾಟಕ
ಶನಿವಾರ, 28, ಸೆಪ್ಟಂಬರ್, 2019

# ಸಮಾಜಸುಧಾರಕರ ಆದರ್ಶ ಪಾಲಿಸಿ

ಸಂ.ಕ. ಸಮಾಚಾರ ಬೆಂಗಳೂರು

ಮಹಿಳೆಯರು ಸಾಮಾಜಿಕ ಕಳಕಳಿಯ ಜೊತೆಗೆ ಕರ್ತವ್ಯ ನಿರ್ವಹಣೆ ಹಾಗೂ ಜವಾಬ್ದಾರಿ ಅರಿತು ಜೀವನ ಸಾಗಿಸುವುದು ಅವಶ್ಯಕ ಎಂದು ಸಾಹಿತಿ ಡಾ. ಗೀತಾ ರಾಮಾನುಜಂ ಅಭಿಪ್ರಾಯಪಟ್ಟರು.

ಕನ್ನಡ ಸಾಹಿತ್ಯ ಪರಿಷತ್ತಿನ ಕುವೆಂಪು ಸಭಾಂಗಣದಲ್ಲಿ ಬೆಂಗಳೂರು ಬ್ರಹ್ಮ ಸಮಾಜ, ಅನಕೃ ಕನ್ನಡ ಸಂಘ ಆಯೋಜಿಸಿದ್ದ ರಾಜಾರಾಮ ಮೋಹನ ರಾಯ್‌ರ ಪುಣ್ಯ ಸಂಸ್ಮರಣೆ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿ, ಮಹಿಳಾ ಸಮಾಜದ ಅಭಿವೃದ್ಧಿಗೆ ರಾಜಾರಾಮ ಮೋಹನರಾಯ್‌ರ ಕೊಡುಗೆ ಅಪಾರ. ಅಂದಿನ ಸಮಾಜದಲ್ಲಿ ಮಹಿಳೆಯರ ಸೂಚನೀಯ ಸ್ಥಿತಿಯನ್ನು ಸುಧಾರಿಸಲು ಬಾಲ್ಯ ವಿವಾಹ, ಸತಿ ಸಹಗಮನ ಪದ್ಧತಿ ನಿರ್ಮೂಲನೆಗೆ ರಾಯ್ ಅವರು ಶ್ರಮಿಸಿದ್ದರು. ಇದರ ಪರಿಣಾಮ ಮಹಿಳೆ ಇಂದು ಸಾಕಷ್ಟು ಪ್ರಗತಿ ಹೊಂದುತ್ತಿದ್ದಾಳೆ ಎಂದರು. ಸಮಾಜ ಸುಧಾರಕರಾದ ರಾಜರಾಮ ಮೋಹನರಾಯ್, ಸ್ವಾಮಿ ವಿವೇಕಾನಂದ, ಶಂಕರಾಚಾರ್ಯ, ಕಾಳಿದಾಸರು ಪ್ರತಿಪಾದಿಸಿದ ಮೌಲ್ಯಗಳು ಇಂದಿನ ಸಮಾಜ-ಕ್ಕೆ ಅತಿ ಅವಶ್ಯಕ. ಹೀಗಾಗಿ ಯುವ ಸಮುದಾಯ ಮಹಾನ್ ಸಮಾಜ ಸುಧಾರಕರ ಜೀವನ ಮತ್ತು ವ್ಯಕ್ತಿತ್ವವನ್ನು ಸ್ಮರಿಸಬೇಕು. ಜೊತೆಗೆ ನಿತ್ಯ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕಿದೆ ಎಂದರು.



ಕಸಾಪದ ಕುವೆಂಪು ಸಭಾಂಗಣದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸಮಾಜ ಸುಧಾರಕ ರಾಜಾರಾಮ ಮೋಹನರಾಯ್ ಅವರ ಭಾವಚಿತ್ರಕ್ಕೆ ಸಾಹಿತಿ ಡಾ. ಗೀತಾ ರಾಮಾನುಜಂ ಪುಷ್ಪನಮನ ಸಲ್ಲಿಸಿದರು.

ಶಿಕ್ಷಣ ತಜ್ಞ ಡಾ. ವೂಡೇ ಪಿ.ಕೃಷ್ಣ ಮಾತನಾಡಿ, ಸಮಾಜಸುಧಾರಕರ ಆದರ್ಶ ಮೌಲ್ಯಗಳ ಸ್ಮರಣೆ ಹಾಗೂ ಪರಿಪಾಲನೆ ಪ್ರತಿಯೊಬ್ಬರ ಕರ್ತವ್ಯ. ಮಹಿಳೆಯರ ಸಮಗ್ರ ಪ್ರಗತಿಗಾಗಿ ರಾಜಾರಾಮ ಮೋಹನರಾಯ್ ಅವರು ಆಸ್ತಿ ಹಕ್ಕನ್ನು ಪ್ರತಿಪಾದಿಸಿದ್ದರು. ನಂತರ ಡಾ. ಬಿ.ಆರ್ ಅಂಬೇಡ್ಕರ್ ಸಂವಿಧಾನದ ಮೂಲಕ ಜಾರಿಗೆ ತಂದರು. ಇಷ್ಟಾದರೂ ಮಹಿಳೆಯರು ಸಶಕ್ತರಾಗದೇ ಇರುವುದು ವಿಪರ್ಯಾಸ ಎಂದರು.

ಅನಕೃ ಕನ್ನಡ ಸಂಘದ ಅಧ್ಯಕ್ಷ ರು. ಬಸಪ್ಪ, ಶೋಭಿನಿ ಗುರುದಾಸ್, ಡಾ. ಅಂಬುಜಾಕ್ಷಿ, ಕೆ.ಎನ್. ಸವಿತಾರಾಮು, ಡಾ.ವಿ.ರಾಣಿಗೋವಿಂದರಾಜು, ಎಸ್.ಟಿ. ಶಾಂತಕುಮಾರಿ ಮತ್ತಿತರರಿದ್ದರು.

ಸಂಯುಕ್ತ ಕರ್ನಾಟಕ

ಮಂಗಳವಾರ, 24, ಸೆಪ್ಟೆಂಬರ್, 2019

# ನಾಯಕತ್ವ ಗುಣ ಬೆಳೆಯಲು ಸಹಕಾರಿ

ಸಂ.ಕ.ಸಮಾಚಾರ ಬೆಂಗಳೂರು

ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದರಿಂದ ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಸನವಾಗಲಿದೆ ಎಂದು ಕ್ರೀಡಾ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಜಿ. ಕಲ್ಪನಾ ಅಭಿಪ್ರಾಯಪಟ್ಟರು.

ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಹಾಗೂ ರಾಜ್ಯ ಎನ್‌ಎಸ್‌ಎಸ್ ಕೋಶ ಸಹಯೋಗದಲ್ಲಿ ಗಾಂಧೀ ಭವನದಲ್ಲಿ ಏರ್ಪಡಿಸಿದ್ದ ಸಾಂಸ್ಕೃತಿಕ ಭಾವೈಕ್ಯತಾ ಉತ್ಸವದಲ್ಲಿ ಮಾತನಾಡಿ, ವಿದ್ಯಾರ್ಥಿಗಳು ರಾಷ್ಟ್ರೀಯ ಸೇವಾ ಯೋಜನೆಯಲ್ಲಿ ಭಾಗವಹಿಸುವುದರಿಂದ ವಿದ್ಯಾರ್ಥಿಗಳಿಗೆ ನಾಯಕತ್ವದ ಗುಣ ಬೆಳೆಯುತ್ತದೆ. ಸಾಂಸ್ಕೃತಿಕ ಕಾರ್ಯಕ್ರಮಗಳು ವಿದ್ಯಾರ್ಥಿಗಳಿಗೆ ವ್ಯಕ್ತಿತ್ವ ವಿಕಸನಕ್ಕೆ ಸಹಕಾರಿಯಾಗಲಿದ್ದು, ಪಠ್ಯೇತರ ಚಟುವಟಿಕೆಗಳಿಂದ ಮಾನಸಿಕ ಸ್ಥಿರತೆ ಕಾಪಾಡಿಕೊಳ್ಳಬಹುದು ಎಂದು ತಿಳಿಸಿದರು.

ರಾಜೀವ್ ಗಾಂಧೀ ಆರೋಗ್ಯ ವಿಜ್ಞಾನ ವಿಶ್ವವಿದ್ಯಾಲಯದ ಕುಲಪತಿ ಡಾ.ಎಸ್.ಸಚ್ಚಿದಾನಂದ ಮಾತನಾಡಿ, ಪ್ರತಿಯೊಬ್ಬ ವಿದ್ಯಾರ್ಥಿ ಎನ್‌ಎಸ್‌ಎಸ್‌ನಲ್ಲಿ ತೊಡಗಿಸಿಕೊಳ್ಳಬೇಕು. ಎನ್‌ಎನ್‌ಎಸ್ ಶಿಬಿರದಲ್ಲಿ ಸಾಮಾಜಿಕ ಪರಿಕಲ್ಪನೆಗಳ ಬೆಳೆಯುತ್ತವೆ. ಮೊದಲು ದೇಶ ನಂತರ ರಾಜ್ಯ ಎಂಬ ಭಾವನೆ ಮೂಡಬೇಕು. ಜವಾಬ್ದಾರಿ, ಸಹಭಾಗಿತ್ವ, ಸಾಮರಸ್ಯ ಬೆಳೆಸಿಕೊಳ್ಳಲು ಎನ್‌ಎಸ್‌ಎಸ್ ಉಪಯುಕ್ತವಾಗಿದೆ ಎಂದು ಹೇಳಿದರು.



ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಹಾಗೂ ರಾಜ್ಯ ಎನ್‌ಎಸ್‌ಎಸ್ ಕೋಶ ಸಹಯೋಗದಲ್ಲಿ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಸಾಂಸ್ಕೃತಿಕ ಭಾವೈಕ್ಯತಾ ಉತ್ಸವವನ್ನು ಕ್ರೀಡಾ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಜಿ. ಕಲ್ಪನಾ ಉದ್ಘಾಟಿಸಿದರು.

ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ವಿವಿಧ ಸಂಸ್ಕೃತಿ, ಧರ್ಮ, ಆಚಾರ, ವಿಚಾರಗಳನ್ನು ಒಳಗೊಂಡ ದೇಶ ಭಾರತ. ದೇಶದ ಉತ್ತಮ ನಾಯಕತ್ವ ಬೆಳೆಸಲು ಎನ್‌ಎಸ್‌ಎಸ್ ತುಂಬ ಸಹಕಾರಿಯಾಗಿದೆ ಎಂದರು. ಈ ವೇಳೆ ವಿವಿಧ ಕಾಲೇಜು ವಿದ್ಯಾರ್ಥಿಗಳು ನಾಟಕ, ನೃತ್ಯ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಟ್ಟರು. ಎನ್‌ಎಸ್‌ಎಸ್ ಪ್ರಾದೇಶಿಕ ನಿರ್ದೇಶಕ ಖಾದ್ರಿ ನರಸಿಂಹಯ್ಯ ಮತ್ತಿತರರಿದ್ದರು.

ಹೊಸ ದಿಗಂತ

ಮಂಗಳವಾರ, 24 ಸೆಪ್ಟೆಂಬರ್ 2019, ಬೆಂಗಳೂರು

ಕ್ರೀಡಾ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ ಜಿ.ಕಲ್ಪನಾ ಅಭಿಮತ

# ಎನ್‌ಎಸ್‌ಎಸ್‌ನಿಂದ ನಾಯಕತ್ವ ಗುಣ ವೃದ್ಧಿ

**ಬೆಂಗಳೂರು:** ರಾಷ್ಟ್ರೀಯಸೇವಾಯೋಜನೆಯಿಂದ ವಿದ್ಯಾರ್ಥಿಗಳಲ್ಲಿ ನಾಯಕತ್ವದ ಗುಣ ಬೆಳೆಯುತ್ತದೆ ಎಂದು ಕ್ರೀಡಾ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಜಿ.ಕಲ್ಪನಾ ಹೇಳಿದರು.

ಯುವಸಬಲೀಕರಣ ಮತ್ತು ಕ್ರೀಡಾ ಇಲಾಖೆ ಹಾಗೂ ರಾಜ್ಯ ಎನ್‌ಎಸ್‌ಎಸ್ ಕೋಶ ಸಹಯೋಗದಲ್ಲಿ ಸೋಮವಾರ ಗಾಂಧಿಭವನದಲ್ಲಿ ಆಯೋಜಿಸಿದ್ದ ಸಾಂಸ್ಕೃತಿಕ ಭಾವೈಕ್ಯತಾ ಉತ್ಸವದಲ್ಲಿ ಮಾತನಾಡಿದ ಅವರು, ರಾಷ್ಟ್ರೀಯ ಸೇವಾ ಯೋಜನೆ ವಿಶ್ವದ ಅತೀದೊಡ್ಡ ಸೇವಾ ಯೋಜನೆಯಾಗಿದ್ದು, ಇದರಲ್ಲಿ ತೊಡಗಿಸಿಕೊಂಡವರಿಗೆ ಉತ್ತಮವಾದ ಅನುಭವ ನೀಡುತ್ತದೆ. ರಾಷ್ಟ್ರೀಯ ಸೇವಾ ಯೋಜನೆ ಸಾಮಾಜಿಕಕಾರ್ಯಗಳಿಗೆಎಡೆಮಾಡಿಕೊಡುತ್ತಿದ್ದು, ಪಠ್ಯೇತರ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದರಿಂದ ವಿದ್ಯಾರ್ಥಿಗಳಲ್ಲಿ ಮಾನಸಿಕ ಸ್ಥಿರತೆ ಕಾಪಾಡಿಕೊಳ್ಳಬಹುದು ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ರಾಜೀವ್ ಗಾಂಧಿ ಆರೋಗ್ಯ



ವಿಜ್ಞಾನ ವಿಶ್ವವಿದ್ಯಾಲಯ ಕುಲಪತಿ ಡಾ.ಎಸ್. ಸಚ್ಚಿದಾನಂದ, ಎನ್‌ಎಸ್‌ಎಸ್‌ನಲ್ಲಿ ಸೇವೆ ಸಲ್ಲಿಸುವವರು ಸಾಮಾಜಿಕ ಜವಾಬ್ದಾರಿ, ಸಹಭಾಗಿತ್ವಹಾಗೂ ಸಾಮರಸ್ಯ ಜೀವನದಂತಹ ಗುಣಗಳನ್ನು ಬೆಳೆಸಿಕೊಳ್ಳುತ್ತಾರೆ. ಕಾರ್ಯಕ್ರಮದಲ್ಲಿ ವಿವಿಧ ರಾಜ್ಯಗಳ ವಿಶ್ವವಿದ್ಯಾಲಯಗಳ ಎನ್‌ಎಸ್ ಎಸ್ ವಿದ್ಯಾರ್ಥಿಗಳು ಆಗಮಿಸಿದ್ದು, ತುಂಬಾ ಸಂತೋಷವಾಗಿದೆ. ನಮ್ಮೆಲ್ಲರಲ್ಲಿ ದೇಶ ಮೊದಲು ನಂತರ ರಾಜ್ಯ ಎಂಬ ಭಾವನೆ ಮೂಡಬೇಕು ಎಂದು ಹೇಳಿದರು.

ಮುಖ್ಯ ಅತಿಥಿಯಾಗಿ ಆಗಮಿಸಿದ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ನಮ್ಮ ದೇಶ ವಿವಿಧ ಸಂಸ್ಕೃತಿ, ಆಚಾರ ವಿಚಾರ, ಭಾಷೆ, ಜಾತಿ, ಧರ್ಮಗಳನ್ನು ಹೊಂದಿದ್ದು, ನಾವೆಲ್ಲರೂ ಒಂದೇ ಎಂಬ ಭಾವನೆ ಬೆಳೆಸಿಕೊಳ್ಳಬೇಕು. ಎನ್ ಎಸ್‌ಎಸ್ ನಿಂದ ವಿದ್ಯಾರ್ಥಿಗಳಲ್ಲಿ ನಾಯಕತ್ವದ ಗುಣಗಳನ್ನು ಬೆಳೆಸಿಕೊಳ್ಳಬಹುದು. ಸರ್ಕಾರಗಳು ರಚನಾತ್ಮಕ ಕಾರ್ಯಗಳಿಗೆ ಪ್ರೋತ್ಸಾಹಿಸಿ ಗ್ರಾಮೀಣ ಮಟ್ಟದಿಂದಲೇ ಬೆಳೆಸುವಂತಹ ಕಾರ್ಯಗಳು ನಡೆಯಬೇಕು ಎಂದರು.

ಕಾರ್ಯಕ್ರಮದಲ್ಲಿ ಡಾ.ಜಿ.ಕಲ್ಪನಾ, ಡಾ.ಎಸ್. ಸಚ್ಚಿದಾನಂದ, ಡಾ.ವೂಡೇ ಪಿ.ಕೃಷ್ಣ ಹಾಗೂ ಖಾದ್ರಿ ನರಸಿಂಹಯ್ಯರವರನ್ನು ಗೌರವಿಸಲಾಯಿತು. ನಂತರ ವಿವಿಧ ರಾಜ್ಯಗಳಿಂದ ಆಗಮಿಸಿದ ವಿದ್ಯಾರ್ಥಿಗಳಿಂದ ನಾಟಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.

23 ಸೆಪ್ಟಂಬರ್, 2019



ಯುವಸಬಲೀಕರಣ ಮತ್ತು ಕ್ರೀಡಾ ಇಲಾಖೆ ಗಾಂಧಿಭವನದಲ್ಲಿಂದು ಹಮ್ಮಿಕೊಂಡಿದ್ದ ರಾಜ್ಯಮಟ್ಟದ ಸುವರ್ಣ ಮಹೋತ್ಸವ ಸಾಂಸ್ಕೃತಿಕ ಭಾವೈಕ್ಯ ಉತ್ಸವವನ್ನು ಕ್ರೀಡಾ ಇಲಾಖೆ ಅಪರ ಮುಖ್ಯಕಾರ್ಯದರ್ಶಿ ಡಾ.ಜಿ.ಕಲ್ಪನಾ ಉದ್ಘಾಟಿಸಿದರು. ರಾಜೀವ್‌ಗಾಂಧಿ ಆರೋಗ್ಯ ವಿವಿಯ ಕುಲಪತಿ ಡಾ.ಎಸ್.ಸಚ್ಚಿದಾನಂದ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಖಾದ್ರಿನರಸಿಂಹಯ್ಯ, ಡಾ.ಗಣನಾಥಶೆಟ್ಟಿ ಎಕ್ಕಾರು, ಡಾ.ಬಿ.ವಸಂತ ಶೆಟ್ಟಿ ಮತ್ತಿತರರು ಉಪಸ್ಥಿತರಿದ್ದರು.



ಕನ್ನಡಪ್ರಭ ಭಾನುವಾರ 15.9.2019



ಶೇಷಾದ್ರಿಪುರಂ ಕಾಲೇಜಿನಲ್ಲಿ ಶನಿವಾರ ಆಯೋಜಿಸಿದ್ದ 'ಕನ್ನಡ ನಾಟಕಗಳ ಮರುಚಿಂತನೆ-ಸಾಹಿತ್ಯ ಮತ್ತು ರಂಗಚಟುವಟಿಕೆ' ಕುರಿತ ರಾಜ್ಯಮಟ್ಟದ ವಿಚಾರ ಸಂಕಿರಣವನ್ನು ಹಿರಿಯ ಸಾಹಿತಿ ಡಾ.ಚಂದ್ರಶೇಖರ ಕಂಬಾರ ಉದ್ಘಾಟಿಸಿದರು.

ಭಾನುವಾರ, 15, ಸೆಪ್ಟೆಂಬರ್, 2019

ಕನ್ನಡವೇ ಸತ್ಯ ಕನ್ನಡವೇ ನಿತ್ಯ

# ನಾಟಕಗಳ ಸಂಭಾಷಣೆಗಳಿಂದ ರಸಾನುಭವ

ಸಂ.ಕ. ಸಮಾಚಾರ ಬೆಂಗಳೂರು

ನಾಟಕಗಳ ಸಂಭಾಷಣೆಗಳು ರಸಾನುಭವವನ್ನು ಒದಗಿಸುವಂತಿರಬೇಕು. ಆಗ ಮಾತ್ರ ನೋಡುಗರ ಮನತಟ್ಟಲು ಸಾಧ್ಯ ಎಂದು ಕೇಂದ್ರ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ. ಚಂದ್ರಶೇಖರ ಕಂಬಾರ ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ಕಾಲೇಜು ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಸಹಯೋಗದಲ್ಲಿ ಆಯೋಜಿಸಿದ್ದ ಕನ್ನಡ ನಾಟಕಗಳ ಮರುಚಿಂತನೆ ಸಾಹಿತ್ಯ ಮತ್ತು ರಂಗಚಟುವಟಿಕೆ ಕುರಿತ ರಾಜ್ಯಮಟ್ಟದ ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಜೀವನಕ್ಕೆ ಹತ್ತಿರವಾದಂತಹ ಸಾರಾಂಶಗಳಿಂದ ಕೂಡಿದ ಹಿಂದಿನ ಕಾಲದ ನಾಟಕಗಳು ನಮ್ಮನ್ನು ಹಿಡಿದಿಟ್ಟುಕೊಂಡಾಗ ನಮಗಾಗುವ ಅನುಭವವೇ ನಿಜವಾದ ರಸಾನುಭವ.

ನಾಟಕಗಳಲ್ಲಿ ಇಂತಹ ಶ್ರೇಷ್ಠ ಗುಣಗಳು ಎಂದೆಂದಿಗೂ ಮುಂದುವರೆಯಬೇಕು ಎಂದ ಅವರು, ನಾಟಕಗಳಲ್ಲಿನ ಪಾತ್ರಗಳ ಸಂಭಾಷಣೆಗಳು ಇಬ್ಬರು ವಕೀಲರ ನಡುವಿನ ವಾದದಂತಿದ್ದರೆ ಅದು ನಾಟಕವೂ ಅಲ್ಲ ರಸಾನುಭವವೂ ಆಗುವುದಿಲ್ಲ ಎಂದರು.

ನಾಟಕಗಳಲ್ಲಿ ಸಂಚಾರಿ ಭಾವನೆಯನ್ನು ಸೃಷ್ಟಿಸುವ ಏಕಾಂತ, ಪಾತ್ರಗಳನ್ನು



ಶೇಷಾದ್ರಿಪುರ ಕಾಲೇಜು ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಸಹಯೋಗದಲ್ಲಿ ಆಯೋಜಿಸಿದ್ದ ರಾಜ್ಯಮಟ್ಟದ ವಿಚಾರ ಸಂಕಿರಣವನ್ನು ಕೇಂದ್ರ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ. ಚಂದ್ರಶೇಖರ ಕಂಬಾರ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ವೂಡೆ ಪಿ. ಕೃಷ್ಣ ಮತ್ತಿತರರಿದ್ದರು.

ಬೆಂಬಲಿಸುವ ಉಪಪಾತ್ರಗಳು, ಸನ್ನಿವೇಶಗಳೂ ಸೇರಿದಂತೆ ಇತರ ವಿಷಯಗಳು ಪ್ರೇಮವೆನ್ನುವ ಸ್ಥಾಯಿಭಾವ ಸೃಷ್ಟಿಸಿದ ನಂತರ ಸೃಷ್ಟಿಯಾಗುವುದೇ ಶೃಂಗಾರಭಾವ, ಶೃಂಗಾರಭಾವದಿಂದಾಗುವ ಅನುಭವವೇ ರಸಾನುಭವ. ನಾಟಕಗಳನ್ನು ವೀಕ್ಷಿಸುವ ವೇಳೆ ನಮ್ಮ ಸ್ಥಾನ-ಮಾನ-ವಯಸ್ಸು ನಮ್ಮ ಬಗೆಗಿನ ಎಲ್ಲ ವಿಷಯಗಳನ್ನು ಮರೆತು ಯಾವುದೇ ಕಾಲದ ವಿಷಯವುಳ್ಳ ನಾಟಕಗಳು ಮತ್ತು ಅದರೊಳಗಿನ ಸಾರಾಂಶವನ್ನು ಶುದ್ಧ ಮನಸ್ಸಿನಿಂದ ಗ್ರಹಿಸುವಂತೆ ಮಾಡುವುದೇ ನಾಟಕಗಳು ನೀಡುವ ರಸಾನುಭವ ಎಂದು ಹೇಳಿದರು.

## ಕನ್ನಡವಿದ್ದರೆ ಇಂಗ್ಲಿಷ್

ಕನಿಷ್ಠ 7ನೇ ತರಗತಿವರೆಗಾದರೂ ಮಾತೃ ಭಾಷೆಯಲ್ಲಿ ಮಕ್ಕಳಿಗೆ ಶಿಕ್ಷಣ ಕೊಡಿಸಿ, ಮಾತೃ ಭಾಷೆಯಲ್ಲಿನ ಸೃಜನಶೀಲತೆಯನ್ನು ಮಕ್ಕಳು ಅರಿತರೆ, ಆಂಗ್ಲಭಾಷೆಯ ಅಪ್ಪನಂತಹ ಭಾಷೆಯನ್ನು ಸುಲಲಿತವಾಗಿ ಕಲಿಯುತ್ತಾರೆ. ಅಚ್ಚ ಕನ್ನಡ ಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರೆ ಭಾಷೆಯ ನಾಜೂಕು, ಸೃಜನಶೀಲತೆ ಮಕ್ಕಳಿಗೆ ಅರಿವಾಗಲಿದೆ. ಈ ಭಾಷೆಯ ಸೃಜನಶೀಲತೆಯನ್ನು ಮುಂದಿನ ಪೀಳಿಗೆಗೂ ಮುಂದುವರೆಸಬೇಕೆಂದರೆ ಭಾಷೆಯಿಂದಲೂ ರಸಾನುಭವವಾಗಬೇಕು. ಕನ್ನಡ ಪದಗಳು ಗ್ರೀಕ್ ನಾಟಕಗಳಲ್ಲಿ ಬಳಕೆಯಾಗುತ್ತಿದ್ದುದು. ಕನ್ನಡ ಭಾಷೆಯ ಶ್ರೇಷ್ಠತೆಗೆ ಮತ್ತು ವೈಶಾಲ್ಯಕ್ಕೆ ಮತ್ತೊಂದು ಉದಾಹರಣೆ.

ನಮ್ಮ ನಾಟಕಗಳಿಗೆ ಭಾರವಾದ ನಮ್ಮ ಮನಸ್ಸುಗಳನ್ನು ಹಗುರ ಮಾಡುವ ಶಕ್ತಿ ಇದೆ. ಸಾಮಾನ್ಯ ಮನುಷ್ಯರೆಲ್ಲರಿಗೂ ಈ ಅನುಭವ, ಸಾಮಾನ್ಯ ನಾಟಕಗಳ ಸಾಮರ್ಥ್ಯ ಈ ಮಟ್ಟ ತಲುಪಿದಾಗ ಮಾತ್ರ ಶ್ರೇಷ್ಠತೆ ಕಾಯ್ದುಕೊಳ್ಳಲು ಸಾಧ್ಯ ಎಂದರು. ಶೇಷಾದ್ರಿಪುರ ಶಿಕ್ಷಣದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ನಟ-ನಿರ್ದೇಶಕ ಹೊಸಹಳ್ಳಿ ದಾಳೇಗೌಡ, ಅಧ್ಯಾಪಕ ಡಾ. ಕೆ.ಪಿ. ನಟರಾಜ್ ಮತ್ತಿತರರು ಉಪಸ್ಥಿತರಿದ್ದರು.

ಹೊಸ ದಿಗಂತ

ಭಾನುವಾರ
15 ಸೆಪ್ಟೆಂಬರ್ 2019

# ಮಾತೃ ಭಾಷೆಯಿಂದ ಮಕ್ಕಳಲ್ಲಿ ಸೃಜನಶೀಲತೆ

**ದಿಗಂತ ವರದಿ, ಬೆಂಗಳೂರು**

ಮಾತೃ ಭಾಷೆಯಿಂದ ಮಕ್ಕಳಲ್ಲಿ ಸೃಜನಶೀಲತೆ ಹೆಚ್ಚುತ್ತದೆ. ಹೀಗಾಗಿ ಪ್ರಾಥಮಿಕ ಶಿಕ್ಷಣ ಮಾತೃ ಭಾಷೆಯಲ್ಲಿಯೇ ಆಗಬೇಕು ಎಂದು ಜ್ಞಾನಪೀಠ ಪುರಸ್ಕೃತ ಡಾ.ಚಂದ್ರಶೇಖರ ಕಂಬಾರ ತಿಳಿಸಿದರು.

ಶೇಷಾದ್ರಿಪುರ ಕಾಲೇಜು ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಆಯೋಜಿಸಿದ್ದ ಕನ್ನಡ ನಾಟಕಗಳ ಮರುಚಿಂತನೆ, ಸಾಹಿತ್ಯ ಮತ್ತು ರಂಗಚಟುವಟಿಕೆ ಎಂಬ ರಾಜ್ಯ ಮಟ್ಟದ ವಿಚಾರ ಸಂಕಿರಣದಲ್ಲಿ ಮಾತನಾಡಿದ ಅವರು, ಮಕ್ಕಳ ಸೃಜನಶಕ್ತಿಯ ಕೊಲೆಯಾಗಬಾರದು. ಹೀಗಾಗಿ ಪ್ರಾಥಮಿಕ ಶಿಕ್ಷಣ ಮಾತೃ ಭಾಷೆಯಲ್ಲಿಯೇ ಆಗಬೇಕು. ನಾಟಕ ಇಂದಿಗೂ ಸೃಜನಶೀಲತೆಯನ್ನು ಮುಂದುವರೆಸಬೇಕಾಗಿದೆ ಎಂದರು.

ಶಿಕ್ಷಣದಲ್ಲಾಗಲೀ, ಸಾಹಿತ್ಯದಲ್ಲಾಗಲೀ, ನಾಟಕದಲ್ಲಾಗಲೀ, ಮಾತೃಭಾಷೆಗೆ ಪ್ರಾಮುಖ್ಯತೆ ನೀಡಬೇಕಾಗಿದೆ. ಆಂಗ್ಲ ಭಾಷೆಯ ದಬ್ಬಾಳಿಕೆ ನಮ್ಮಲ್ಲಿರುವ ಜ್ಞಾನ, ಪ್ರತಿಭೆಗಳನ್ನು ಕೀಳು ಎಂಬ ಭಾವನೆ ಹುಟ್ಟಿಸಿತ್ತು. ಇದರಿಂದ ಹೊರಬರಬೇಕಾಗಿದೆ . ಭಾರತದಲ್ಲಿ ಶ್ರೇಷ್ಠ ಸಾಹಿತ್ಯ ಎಂದರೆ ಕತೆ, ಕಥನಗಳು. ಪ್ರಪಂಚಕ್ಕೇ ಕತೆಯ ಕೊಡುಗೆ ಭಾರತದ್ದು. ನಾಟಕಗಳಲ್ಲಿ ಸೃಜನಶೀಲತೆ ಮುಂದುವರೆಸಬೇಕಾಗಿದೆ ಎಂದರು.



ಬಳಿಕ ಮಾತನಾಡಿದ ಸಂಸ್ಥೆಯ ಮುಖ್ಯಸ್ಥ ವೂಡೆ.ಪಿ ಕೃಷ್ಣ, ನಾಟಕವೊಂದು ಕಲಿಕಾ ಮಾಧ್ಯಮವಾಗಿದೆ. ಇದು ಸದಾ ಚಲನಶೀಲವಾಗಿರಬೇಕು. ಜ್ಞಾನ ನಮ್ಮನ್ನು ಪಾಪಿಷ್ಟರನ್ನಾಗಿಸಿದೆ ಎಂದು ಪಾಶ್ಚಿಮಾತ್ಯರು ನಮ್ಮನ್ನು ಬಿಂಬಿಸಿದರು. ಇದನ್ನು ಪುನರ್ ಸ್ಥಾಪಿಸುವ ಕೆಲಸ ನಡೆಯುತ್ತಿದೆ ಎಂದರು.

ಸಮಾರಂಭದಲ್ಲಿ ಕಾಲೇಜು ಪ್ರಾಂಶುಪಾಲೆ ಡಾ.ಅನುರಾಧ ರಾಯ್, ಎಂ.ಎಸ್.ನಟರಾಜ್, ಪ್ರೊ.ಕೆ.ಕೃಷ್ಣಸ್ವಾಮಿ , ಡಾ.ಮೀರಾ ಎಚ್.ಎಸ್ ಹಾಗೂ ಇನ್ನಿತರ ಗಣ್ಯರು ಉಪಸ್ಥಿತರಿದ್ದರು.

14 ಸೆಪ್ಟೆಂಬರ್, ಶನಿವಾರ, 2019



ಶೇಷಾದ್ರಿಪುರಂ ಕಾಲೇಜು ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಸಹಯೋಗದಲ್ಲಿ ನಗರದಲ್ಲಿಂದು ಹಮ್ಮಿಕೊಂಡಿದ್ದ ಕನ್ನಡ ನಾಟಕಗಳ ಮರು ಚಿಂತನೆ , ಸಾಹಿತ್ಯ ಮತ್ತು ರಂಗ ಚಟುವಟಿಕೆ ಕುರಿತ ರಾಜ್ಯ ಮಟ್ಟದ ವಿಚಾರ ಸಂಕಿರಣವನ್ನು ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರಾದ ಡಾ. ಚಂದ್ರಶೇಖರ ಕಂಬಾರ ಉದ್ಘಾಟಿಸಿದರು. ಕಾಲೇಜಿನ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ. ಪಿ. ಕೃಷ್ಣ, ಡಾ. ಕೆ. ಪಿ. ನಟರಾಜ್, ಡಾ. ಅನುರಾಧರಾಯ್, ಕೃಷ್ಣಸ್ವಾಮಿ ಸೇರಿದಂತೆ ಮತ್ತಿತರರು ಹಾಜರಿದ್ದರು.

ಬೆಂಗಳೂರು, ಸೆ. 14– ನೋಡುಗರಲ್ಲಿ ರಸಾನುಭವ ಸೃಷ್ಟಿಸುವುದೇ ಭಾರತೀಯ ನಾಟಕಗಳ ಶ್ರೇಷ್ಠ ಗುಣ ಎಂದು ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಸಾಹಿತಿ, ಚಂದ್ರಶೇಖರ ಕಂಬಾರ ಹೇಳಿದರು.

ಶೇಷಾದ್ರಿಪುರಂ ಕಾಲೇಜಿನಲ್ಲಿ ಏರ್ಪಡಿಸಿದ್ದ ಕನ್ನಡ ನಾಟಕಗಳ ಮರು ಚಿಂತನೆ ಸಾಹಿತ್ಯ ಮತ್ತು ರಂಗಚಟುವಟಿಕೆ ಕುರಿತ ವಿಚಾರ ಸಂಕಿರಣ ಉದ್ಘಾಟಿಸಿ ಮಾತನಾಡಿದರು.

ನಮ್ಮ ಕಾಲಮಾನಕ್ಕೆ ಹೊಂದಿಕೊಳ್ಳದ ಹಾಗೂ ನಮಗೆ ಸಂಬಂಧವೇ ಇಲ್ಲದ ಸಾರಾಂಶಗಳಿಂದಕೂಡಿದಯಾವುದೋಕಾಲದ ನಾಟಕಗಳನ್ನುನಮ್ಮನ್ನುಹಿಡಿದಿಟ್ಟುಕೊಂಡಾಗ ನಮಗಾಗುವ ಅನುಭವವೇ ನಿಜವಾದ ರಸಾನುಭವ.

ನಾಟಕಗಳಲ್ಲಿ ಇಂತಹ ಶ್ರೇಷ್ಠ ಗುಣಗಳು ಎಂದೆಂದಿಗೂ ಮುಂದುವರೆಯಬೇಕು ಎಂದ ಅವರು, ನಾಟಕಗಳಲ್ಲಿನ ಪಾತ್ರಗಳ ಸಂಭಾಷಣೆಗಳು ಇಬ್ಬರು ವಕೀಲರ ನಡುವಿನ ವಾದದಂತಿದ್ದರೆ ಅದು ನಾಟಕವೂ ಅಲ್ಲ ರಸಾನುಭವವೂ ಆಗುವುದಿಲ್ಲ ಎಂದರು.

ನಾಟಕಗಳಲ್ಲಿ ಸಂಚಾರಿ ಭಾವನೆಯನ್ನು ಸೃಷ್ಟಿಸುವ ಏಕಾಂತ, ಪಾತ್ರಗಳನ್ನು ಬೆಂಬಲಿಸುವ ಉಪಪಾತ್ರಗಳು, ಸನ್ನಿವೇಶಗಳೂ ಸೇರಿದಂತೆ ಇತರವಿಷಯಗಳು ಪ್ರೇಮವೆನ್ನುವ ಸ್ಥಾಯಿಭಾವ ಸೃಷ್ಟಿಸಿದ ನಂತರ ಸೃಷ್ಟಿಯಾಗುವುದೇ ಶೃಂಗಾರಭಾವ, ಶೃಂಗಾರಭಾವದಿಂದಾಗುವ ಅನುಭವವೇ ರಸಾನುಭವ ಎಂದರು,



ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಇಂದು ನಡೆದ ಕನ್ನಡ ನಾಟಕಗಳ ಮರುಚಿಂತನೆ ಸಾಹಿತ್ಯ ರಂಗ ಚಟುವಟಿಕೆ ವಿಚಾರ ಸಂಕಿರಣದಲ್ಲಿ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ. ಚಂದ್ರಶೇಖರ ಕಂಬಾರ ಅವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣವಲ್ಲ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಮತ್ತಿತರರು ಇದ್ದಾರೆ

ನಾಟಕಗಳನ್ನು ವೀಕ್ಷಿಸುವ ವೇಳೆ ನಮ್ಮ ಸ್ಥಾನ-ಮಾನ-ವಯಸ್ಸು ನಮ್ಮ ಬಗೆಗಿನ ಎಲ್ಲ ವಿಷಗಳನ್ನು ಮರೆತು ಯಾವುದೇ ಕಾಲದ ವಿಷಯವುಳ್ಳ ನಾಟಕಗಳು ಮತ್ತು ಅದರೊಳಗಿನಸಾರಾಂಶವನ್ನುಶುದ್ಧಮನಸ್ಸಿನಿಂದ ಗ್ರಹಿಸುವಂತೆ ಮಾಡುವುದೇ ನಾಟಕಗಳು ನೀಡುವ ರಸಾನುಭವ ಎಂದರು.

ನಮ್ಮ ನಾಟಕಗಳಿಗೆ ಭಾರವಾದ ನಮ್ಮ ಮನಸ್ಸುಗಳನ್ನು ಹಗುರ ಮಾಡುವ ಶಕ್ತಿ ಇದೆ. ಸಾಮಾನ್ಯ ಮನುಷ್ಯರೆಲ್ಲರಿಗೂ ಈ ಅನುಭವ ಸಾಮಾನ್ಯ. ನಾಟಕಗಳ ಸಾಮರ್ಥ್ಯ ಈ ಮಟ್ಟ ತಲುಪಿದಾಗ ಮಾತ್ರ ಶ್ರೇಷ್ಠತೆ ಕಾಯ್ದುಕೊಳ್ಳಲು ಸಾಧ್ಯ ಎಂದರು.

ವೇದಿಕೆಯಲ್ಲಿ ಶೇಷಾದ್ರಿಪುರಂ ಶಿಕ್ಷಣಪತ್ರಿ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ನಟ-ನಿರ್ದೇಶಕ ಹೊಸಹಳ್ಳಿ ದಾಳೇಗೌಡ, ಅಧ್ಯಾಪಕ ಡಾ. ಕೆ.ಪಿ. ನಟ-ರಾಜ್ ಇತರರಿದ್ದರು.

■ **ಭಾಷೆಯ ಸೃಜನಶೀಲತೆಯನ್ನು ಮುಂದಿನ ಪೀಳಿಗೆಗೂ ಮುಂದುವರೆಸಬೇಕೆಂದರೆ ಭಾಷೆಯಿಂದಲೂ ರಸಾನುಭವವಾಗಬೇಕು. ಕನ್ನಡ ಪದಗಳು ಗ್ರೀಕ್ ನಾಟಕಗಳಲ್ಲಿ ಬಳಕೆಯಾಗುತ್ತಿದ್ದುದು. ಕನ್ನಡ ಭಾಷೆಯ ಶ್ರೇಷ್ಠತೆಗೆ ಮತ್ತು ವೈಶಾಲ್ಯಕ್ಕೆ ಮತ್ತೊಂದು ಉದಾಹರಣೆ.**

**– ಚಂದ್ರಶೇಖರ ಕಂಬಾರ, ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು**

# ಶತಮಾನಗಳ ಕನ್ನಡಿಗೆ ಜನ್ಮದಿನದ ಸಡಗರ

ಕೇಂದ್ರದ ಮಾಜಿ ಸಚಿವ ಡಾ. ಎಂ.ವಿ. ರಾಜಶೇಖರನ್ ಅವರ 92 ನೇ ಜನ್ಮದಿನದ ಅಂಗವಾಗಿ ಗುರುವಾರ ನಡೆದ ಕಾರ್ಯಕ್ರಮದಲ್ಲಿ ಅವರಿಗೆ ಮೈಸೂರು ಪೇಟಾ ತೊಡಿಸಿ ಸತ್ಕರಿಸಲಾಯಿತು. ಮಾಜಿ ಸಂಸದ ಐ.ಜಿ. ಸನದಿ, ವಿಧಾನ ಪರಿಷತ್‌ನ ಮಾಜಿ ಸಭಾಪತಿ ವೀರಣ್ಣಮತ್ತಿಕಟ್ಟಿ ಮುಂತಾದವರು ಈ ಸಂದರ್ಭದಲ್ಲಿದ್ದರು.

ಸಂ.ಕ. ಸಮಾಚಾರ ಬೆಂಗಳೂರು,

ಎರಡು ಶತಮಾನಗಳ ಕೊಂಡಿಯಂತಿರುವ ಕೇಂದ್ರದ ಮಾಜಿ ಸಚಿವ ಡಾ. ಎಂ.ವಿ. ರಾಜಶೇಖರನ್ ಅವರಿಗೆ 92 ನೇ ಜನ್ಮದಿನದ ಸಂಭ್ರಮ...

ರಾಜಕಾರಣ, ಸಮಾಜಸೇವೆಯಲ್ಲಿ ಮಾಗಿದ ಜೀವಕ್ಕೆ ಜನ್ಮದಿನದ ಅಭಿನಂದನೆಯ ಮಹಾಪೂರ. ರಾಜಶೇಖರನ್ ಅವರ ಜತೆ ರಾಜಕಾರಣದಲ್ಲಿ ಜತೆ ಜತೆಗೆ ಹೆಜ್ಜೆ ಹಾಕಿದ ಸಮಾನಮನಸ್ಕ ರಾಜಕಾರಣಿಗಳು, ಅವರ ಅಭಿಮಾನಿಗಳು, ಶಿಕ್ಷಣ ತಜ್ಞರು, ವಿದ್ಯಾರ್ಥಿಗಳು, ರಾಜಶೇಖರನ್ ಅವರ ಅಭಿಮಾನಿಗಳ ಶುಭಾಶಯಗಳ ಮಧ್ಯೆ ಸಂತಸದ ಅಲೆ.

ಗಾಂಧಿಭವನದಲ್ಲಿ ಗುರುವಾರ ಹಮ್ಮಿಕೊಂಡಿದ್ದ ರಾಜಶೇಖರನ್ ಅವರ ಜನ್ಮದಿನದ ಕಾರ್ಯಕ್ರಮದಲ್ಲಿ ಕಂಡು ಬಂದ ದೃಶ್ಯಗಳಿವು. ಆಗಿನ ಮುಖ್ಯಮಂತ್ರಿ ನಿಜಲಿಂಗಪ್ಪ ಅವರ ಅಳಿಯ ಆಗಿದ್ದರೂ ರಾಜಶೇಖರನ್ ಅವರಿಗೆ ಆವಾಗ ಮತ್ತು ಈವಾಗ ಯಾವ ಹಮ್ಮೂ ಇಲ್ಲ. ಸರಳತೆ, ಪ್ರಬುದ್ಧತೆ, ಸಮಾಜಕ್ಕಾಗಿ ತುಡಿಯುವ ಅವರ ಮನಸ್ಸು ರಾಜಶೇಖರನ್ ಅವರ ವ್ಯಕ್ತಿತ್ವನ್ನು ಶಿಖರಕ್ಕೇರಿಸಿದೆ ಎಂಬುದು ಅವರ ಸ್ನೇಹಿತರ ಅಭಿಪ್ರಾಯ.

ತಮ್ಮ ಹನ್ನೊಂದನೇ ವಯಸ್ಸಿನಲ್ಲಿಯೇ ಸಾರ್ವಜನಿಕ ಜೀವನಕ್ಕೆ ಕಾಲಿರಿಸಿದ ರಾಜಶೇಖರನ್ ಅವರಿಗೆ ಮಹಾತ್ಮಾಗಾಂಧಿ, ಇಂದಿರಾಗಾಂಧಿ, ಜೆಆರ್‌ಡಿ ಟಾಟಾ ಅವರು ಆದರ್ಶ. 1945 ರಲ್ಲಿ ಚೆನ್ನೈನಲ್ಲಿ ಮಹಾತ್ಮಾಗಾಂಧಿ ಅವರನ್ನು ಭೇಟಿಯಾಗಿ ಚರ್ಚೆ ನಡೆಸಿದ್ದರು. ರಾಜಶೇಖರನ್ ಅವರ ರಾಜಕೀಯ ಪಯಣದಲ್ಲಿ ಸಿಕ್ಕವರೂ ಸಹ ಪ್ರಬುದ್ಧರೇ. ವೆಲ್ಲೂರಿನ ತಾಂತ್ರಿಕ ಮಹಾವಿದ್ಯಾಲಯದ ಡಾ. ಜಿ. ವಿಶ್ವನಾಥ್, ರಾಜ್ಯಸಭೆಯ ಮಾಜಿ ಸದಸ್ಯ ಡಾ. ಎಚ್. ಹನುಮಂತಪ್ಪ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ ಕೃಷ್ಣ ಅವರು ರಾಜಶೇಖರನ್ ಅವರ ಜೀವನ, ಅವರು ನಡೆದುಬಂದ ದಾರಿ ಬೇರೆಯವರಿಗೆ ಆದರ್ಶವಾಗಿರುವ ಅವರ ಸಾರ್ವಜನಿಕ ಬದುಕಿನ ಬಗ್ಗೆ ಮಾತನಾಡಿದರು.

## ಎಂ.ವಿ. ರಾಜಶೇಖರನ್ ಅವರಿಗೆ ಸತ್ಕಾರ

ತಮ್ಮ ಜನ್ಮದಿನವನ್ನು ಅರ್ಥಪೂರ್ಣವಾಗಿ ಆಚರಿಸಿಕೊಳ್ಳುವ ಸಂಕಲ್ಪ ಮಾಡಿರುವ ಡಾ. ರಾಜಶೇಖರನ್ ಅವರು ಈ ಬಾರಿ ವೆಲ್ಲೂರು ತಾಂತ್ರಿಕ ಮಹಾವಿದ್ಯಾಲಯದ ಸಂಸ್ಥಾಪಕ ಹಾಗೂ ಕುಲಪತಿ ಡಾ. ಜಿ. ವಿಶ್ವನಾಥನ್ ಅವರಿಂದ ಸಾರ್ವಜನಿಕ ಜೀವನದಲ್ಲಿ ಮೌಲ್ಯಗಳು ಎಂಬ ವಿಷಯದ ಮೇಲೆ ಉಪನ್ಯಾಸ ಏರ್ಪಡಿಸಿದ್ದರು.

ಸುಧೀರ್ಘ ಉಪನ್ಯಾಸ ನೀಡಿದ ಡಾ. ವಿಶ್ವನಾಥನ್ ಅವರು ಇಂದು ನಾವೆಲ್ಲ ಆರ್ಥಿಕವಾಗಿ ಮೇಲೇರುತ್ತಿವೆ. ಆದರೆ ನೈತಿಕತೆಯಲ್ಲಿ ಕುಸಿಯುತ್ತಿದ್ದೇವೆ.

ಆಗ ಒಂದು ಕ್ಷೇತ್ರಕ್ಕೆ ಕೇವಲ ನಾಲ್ಕು ಸಾವಿರ ರೂಗಳಲ್ಲಿ ಚುನಾವಣೆಗಳನ್ನು ಮಾಡುತ್ತಿದ್ದರೆ ಇಂದು ಅದು ನೂರು ಕೋಟಿ ತಲುಪಿದೆ.

ರಾಜಕಾರಣಿಗಳು ಚುನಾವಣೆಗಳಿಗೆ ಮಾಡಿದ ಖರ್ಚನ್ನು ಸರಿದೂಗಿಸಲು, ಕೆಲಸಕ್ಕೆ ಸೇರುವ ಮುನ್ನ ಕೊಟ್ಟ ದುಡ್ಡನ್ನು ಪಡೆದುಕೊಳ್ಳಲು ಅಧಿಕಾರಿಗಳು ಹೀಗೆ ಭ್ರಷ್ಟಾಚಾರ ತಾಂಡವವಾಡುತ್ತಿದೆ. ವಿದ್ಯಾವಂತರೂ ಮತ ಹಾಕುವುದಕ್ಕೆ ಹಣ ಪಡೆಯುತ್ತಿದ್ದಾರೆ. ನ್ಯಾಯಾಂಗ ವ್ಯವಸ್ಥೆಯಲ್ಲಿಯೂ ಸುಧಾರಣೆ ಅಗತ್ಯ ಎನ್ನುವುದನ್ನು ಪ್ರತಿಪಾದಿಸಿದರು.

ಮಾಜಿ ಸಂಸದರಾದ ನಾರಾಯಣಸ್ವಾಮಿ; ಐ.ಜಿ. ಸನದಿ, ಮಾಜಿ ಸಚಿವ ಬಿ.ಜೆ. ಪುಟ್ಟಸ್ವಾಮಿ, ಮಾಜಿ ಶಾಸಕ ಚಂದ್ರಕಾಂತ ಬೆಲ್ಲದ, ಮಾಜಿ ಸಭಾಪತಿ ವೀರಣ್ಣ ಮತ್ತಿಕಟ್ಟಿ, ಶಿಕ್ಷಣ ತಜ್ಞ ದೊರೆಸ್ವಾಮಿ, ತೋಟಗಾರಿಕೆ ವಿವಿ ಉಪಕುಲಪತಿ ದಂಡಿನ್, ಬೆಂಗಳೂರು ವಿವಿಯ ಡಾ. ಗೋವಿಂದೇಗೌಡ, ಎಂವಿಆರ್ ಫೌಂಡೇಶನ್ ಕಾರ್ಯದರ್ಶಿ ಸಂಧ್ಯಾ ಪ್ರದೀಪ್ ಕುಮಾರ್ ಸೇರಿದಂತೆ ಎಂವಿಆರ್ ಫೌಂಡೇಶನ್‌ನ ಸದಸ್ಯರು, ವಿದ್ಯಾರ್ಥಿಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

> ರಾಜಕೀಯ, ಆರ್ಥಿಕ, ಸಾಮಾಜಿಕವಾಗಿ ಸುಧಾರಣೆ ಆಗುವವರೆಗೂ ಉದ್ಧಾರವಾಗುವುದು ಸಾಧ್ಯವಿಲ್ಲ. ಮೊದಲು ನಮ್ಮನ್ನು ನಾವು ಸುಧಾರಿಸಿಕೊಳ್ಳುವ ಅನಿವಾರ್ಯ ಈಗ ಇದೆ.
>
> | ಡಾ. ಜಿ. ವಿಶ್ವನಾಥನ್
> ವೆಲ್ಲೂರು ತಾಂತ್ರಿಕ ಮಹಾವಿದ್ಯಾಲಯ ಕುಲಪತಿ

> ರಾಜಶೇಖರನ್ ಅವರ ಜನ್ಮದಿನ ಎಂದರೆ ಅದು ಆಡಂಬರವಲ್ಲ. ಸಾಮಾಜಿಕವಾಗಿ ತಿಳಿದುಕೊಳ್ಳುವ ಅಂಶಗಳು ಇರುವ ಉಪನ್ಯಾಸಗಳು ಇರುತ್ತವೆ. ನೈತಿಕತೆ ಎನ್ನುವುದು ರಾಜಶೇಖರನ್ ಅವರಿಂದ ಕಲಿಯಬಹುದು
>
> ಡಾ.ಎಚ್. ಹನುಮಂತಪ್ಪ
> ರಾಜ್ಯಸಭೆ ಮಾಜಿ ಸದಸ್ಯ

> ನನ್ನ ಹನ್ನೊಂದನೇ ವಯಸ್ಸಿಗೆ ಸಾರ್ವಜನಿಕ ಜೀವನಕ್ಕೆ ಕಾಲಿರಿಸಿ ಅನೇಕ ಮೆಟ್ಟಿಲುಗಳನ್ನು ಏರಿ ಬಂದಿದ್ದೇನೆ. ಪ್ರತಿಯೊಬ್ಬರನ್ನೂ ಗೌರವಿಸುವುದು ನನ್ನ ಕರ್ತವ್ಯವೆಂದು ತಿಳಿದು ಕೆಲಸ ಮಾಡಿದ್ದೇನೆ.
>
> | ಡಾ. ಎಂ.ವಿ. ರಾಜಶೇಖರನ್
> ಕೇಂದ್ರದ ಮಾಜಿ ಸಚಿವ

# ಸಂಯುಕ್ತ ಕರ್ನಾಟಕ

ಶುಕ್ರವಾರ, 6, ಸೆಪ್ಟೆಂಬರ್, 2019




ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆ ವತಿಯಿಂದ ಉತ್ತರ ಕರ್ನಾಟಕ ನೆರೆ ಸಂತ್ರಸ್ತರ ನೆರವಿಗಾಗಿ ಮುಖ್ಯಮಂತ್ರಿಗಳ ಪ್ರಕೃತಿ ವಿಕೋಪ ಪರಿಹಾರ ನಿಧಿಗೆ 25 ಲಕ್ಷ ರೂ.ಗಳ ಚೆಕ್ ಅನ್ನು ದೇಣಿಗೆ ನೀಡಲಾಯಿತು. ಮುಖ್ಯಮಂತ್ರಿ ಯಡಿಯೂರಪ್ಪ, ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ, ಸಚಿವ ವಿ.ಸೋಮಣ್ಣ ಮತ್ತಿತರರಿದ್ದರು.

ವಿಜಯವಾಣಿ

ಶುಕ್ರವಾರ 6 ಸೆಪ್ಟೆಂಬರ್ 2019
6 SEPTEMBER 2019




ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆ ವತಿಯಿಂದ ನೆರೆ ಸಂತ್ರಸ್ತರಿಗಾಗಿ 25 ಲಕ್ಷ ರೂ.ಗಳನ್ನು ಮುಖ್ಯಮಂತ್ರಿಗಳ ಪ್ರಕೃತಿ ವಿಪತ್ತು ಪರಿಹಾರ ನಿಧಿಗೆ ನೀಡಲಾಯಿತು.. ಸಂಸ್ಥೆ ಅಧ್ಯಕ್ಷ ಎನ್. ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಹಾಗೂ ಟ್ರಸ್ಟಿಗಳು ಸಿಎಂ ಯಡಿಯೂರಪ್ಪ ಅವರಿಗೆ ಚೆಕ್ ಹಸ್ತಾಂತರಿಸಿದರು.

# ಈ ಸಂಜೆ

06-09-2019



ಉತ್ತರಕರ್ನಾಟಕ ನೆರೆ ಸಂತ್ರಸ್ತರ ನಿಧಿಗಾಗಿ ಮುಖ್ಯಮಂತ್ರಿಗಳ ಪ್ರಕೃತಿ ವಿಪತ್ತು ಪರಿಹಾರ ನಿಧಿಗೆ ಶೇಷಾದ್ರಿಪುರಂ ಸಮೂಹ ಸಂವಹನ ಶಿಕ್ಷಣ ಸಂಸ್ಥೆ ವತಿಯಿಂದ 25ಲಕ್ಷ ರೂ.ಗಳ ಚೆಕ್‌ನ್ನು ಸಿಎಂ ಯಡಿಯೂರಪ್ಪ ಅವರಿಗೆ ಹಸ್ತಾಂತರಿಸಲಾಯಿತು. ಸಂಸ್ಥೆ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಪ್ರಧಾನಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ, ಧರ್ಮದರ್ಶಿ ಸೇರಿದಂತೆ ಮತ್ತಿತರರು ಪಾಲ್ಗೊಂಡಿದ್ದರು.

ಪ್ರಜಾವಾಣಿ
ಶುಕ್ರವಾರ • ಸೆಪ್ಟೆಂಬರ್ 6, 2019



ಉತ್ತರ ಕರ್ನಾಟಕದ ನೆರೆ ಪರಿಹಾರಕ್ಕಾಗಿ ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಯ ವತಿಯಿಂದ ಮುಖ್ಯಮಂತ್ರಿಗಳ ಪ್ರಕೃತಿ ವಿಕೋಪ ಪರಿಹಾರ ನಿಧಿಗೆ ₹25 ಲಕ್ಷ ಮೊತ್ತದ ಚೆಕ್ ಅನ್ನು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರಿಗೆ ನೀಡಲಾಯಿತು. ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಹಾಗೂ ಟ್ರಸ್ಟಿಗಳು ಇದ್ದರು

# ವಿಜಯ ಕರ್ನಾಟಕ VK

ಶುಕ್ರವಾರ,6 ಸೆಪ್ಟೆಂಬರ್ 2019, ಬೆಂಗಳೂರು




ಬೆಂಗಳೂರಿನ ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆ ವತಿಯಿಂದ ನೆರೆಪರಿಹಾರ ನಿಧಿಗೆ 25 ಲಕ್ಷ ರೂ. ಚೆಕ್ ಅನ್ನು ಸಿಎಂ ಬಿ.ಎಸ್.ಯಡಿಯೂರಪ್ಪ ಅವರಿಗೆ ಗುರುವಾರ ಹಸ್ತಾಂತರಿಸಲಾಯಿತು. ಸಂಸ್ಥೆ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ, ಸಚಿವ ಸೋಮಣ್ಣ ಮತ್ತಿತರರಿದ್ದರು.

ಗುರುವಾರ 5 ಸೆಪ್ಟೆಂಬರ್ 2019
5 SEPTEMBER 2019

## ಶೀಘ್ರದಲ್ಲೇ ಡಿಆರ್‌ಡಿಒ ಯೋಜನೆ | ಭಾರತೀಯ ತಂತ್ರಜ್ಞಾನ ಸಮಾವೇಶದಲ್ಲಿ ಮಾಹಿತಿ

# ಸೇನಾ ಸಾಮರ್ಥ್ಯ ವೃದ್ಧಿಗೆ ರುಸ್ತುಂ-2

ಬೆಂಗಳೂರು: ಭಾರತಕ್ಕೆ ನುಸುಳುವ ಶತ್ರುಗಳ ಚಲನವಲನಗಳ ಮೇಲೆ ಕಣ್ಣಿಟ್ಟು ಕ್ಷಣಾರ್ಧದಲ್ಲೇ ವಿಡಿಯೋ ಹಾಗೂ ಫೋಟೋಗಳನ್ನು ರವಾನಿಸುವ ಚಾಲಕರಹಿತ ವಾಯುನೌಕೆ (ಯುಎವಿ) 'ರುಸ್ತುಂ-2' ಮುಂದಿನ ವರ್ಷಗಳಲ್ಲಿ ಭಾರತೀಯ ಸೇನಾ ಪಡೆಗೆ ಸೇರ್ಪಡೆಗೊಳ್ಳುವ ಮುಖಾಂತರ ಆನೆಬಲ ನೀಡಲಿದೆ.

ನಿಮ್ಹಾನ್ಸ್ ಸಭಾಂಗಣದಲ್ಲಿ ನಡೆಯುತ್ತಿರುವ ಭಾರತೀಯ ತಂತ್ರಜ್ಞಾನ ಸಮಾವೇಶದಲ್ಲಿ ರುಸ್ತುಂ-2 ಯುಎವಿ ಚಿತ್ರಗಳನ್ನು ಪ್ರದರ್ಶನಕ್ಕೆ ಇಡಲಾಗಿದೆ. ಡಿಆರ್‌ಡಿಒ ಸಂಸ್ಥೆ ಈ ಮಹತ್ವಾಕಾಂಕ್ಷಿ ಯೋಜನೆಯಲ್ಲಿ ತೊಡಗಿಕೊಂಡಿದೆ.

**'ರುಸ್ತುಂ-2' ವೈಶಿಷ್ಟ್ಯಗಳು:** ಭಾರತದ ಗಡಿಯೊಳಗೆ ಭಯೋತ್ಪಾದಕರು ಹಾಗೂ ಪಾಕ್ ಸೈನಿಕರ ನುಸುಳುವಿಕೆ ಹೆಚ್ಚಾಗುತ್ತಿರುವ ಹಿನ್ನೆಲೆಯಲ್ಲಿ ಸಂಪೂರ್ಣವಾಗಿ ಮಟ್ಟಹಾಕಲು ಹಾಗೂ ಶತ್ರುಗಳ ಚಲನವಲನಗಳನ್ನು ಸೆರೆಹಿಡಿಯಲು ಡಿಆರ್‌ಡಿಒ ರುಸ್ತುಂ-2 ಸಿದ್ಧಪಡಿಸಿದೆ. ಹಲವು ಹಂತಗಳ ಪ್ರಾಯೋಗಿಕ ಪರೀಕ್ಷೆಗಳನ್ನು ಇದು ಯಶಸ್ವಿಯಾಗಿ ಪೂರೈಸಿದೆ. ವಿಮಾನದಲ್ಲಿ ರಾಡಾರ್ ಹಾಗೂ ಎಲೆಕ್ಟ್ರಾ ಕ್ಯಾಮರಾ ಮೂಲಕ ಅಂದಾಜು 1 ಸಾವಿರ ಕಿ.ಮೀ. ಅಂತರದಲ್ಲಿ ಶತ್ರುಗಳ ಚಟುವಟಿಕೆಗಳ ಮೇಲೆ ನಿಗಾ ಇಟ್ಟು ವಿಡಿಯೋ ಹಾಗೂ ಚಿತ್ರಗಳನ್ನು ರಕ್ಷಣಾ ಪಡೆಗೆ ಕಳುಹಿಸುತ್ತದೆ. ದಿನದ 24 ಗಂಟೆಯೂ ಕೆಲಸ ಮಾಡಲಿದ್ದು, ವಿಮಾನದ ಕೆಳಗೆ ಅಳವಡಿಸುವ ರಾಡಾರ್ ಎಂತಹ ಪರಿಸ್ಥಿತಿಯಲ್ಲಿಯೂ ವಿಡಿಯೋಗಳನ್ನು ಸೆರೆಹಿಡಿಯುವ ಸಾಮರ್ಥ್ಯ ಹೊಂದಿದೆ. ಇದರ ತೂಕ 12 ಟನ್ ಇದ್ದು, ಗಂಟೆಗೆ 400 ಕೀ.ಮೀ. ವೇಗದಲ್ಲಿ ಚಲಿಸಲಿದೆ.



ಭಾರತೀಯ ತಂತ್ರಜ್ಞಾನ ಸಮಾವೇಶಕ್ಕೆ ಚಾಲನೆ ನೀಡಿದ ನಂತರ 'ಲಕ್ಷ್ಯ' ಯುದ್ಧ ವಿಮಾನದ ಪ್ರತಿಕೃತಿ ವೀಕ್ಷಿಸಿದ ಉಪ ಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥನಾರಾಯಣ. ಡಿಆರ್‌ಡಿಒ ಅಧಿಕಾರಿಗಳು ಉಪಸ್ಥಿತರಿದ್ದರು.

### 2 ಸಾವಿರ ಕೋಟಿ ರೂ. ಅಗತ್ಯ

ರುಸ್ತುಂ-2 ತಯಾರಿಸಲು 2 ಸಾವಿರ ಕೋಟಿ ರೂ. ಬೇಕಿದೆ. ಒಂದು ವೇಳೆ ಕೇಂದ್ರ ಸರ್ಕಾರ ಅನುದಾನ ನೀಡಿದರೆ ಈ ಯೋಜನೆ ಕೈಗೆತ್ತಿಕೊಳ್ಳಲಾಗುವುದು. ಇದರ ಬಿಡಿಭಾಗಗಳ ತಯಾರಿಕೆಗೆ ಮುಂದಿನ ವರ್ಷದಲ್ಲಿ ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್‌ಗೆ (ಎಚ್‌ಎಎಲ್) ನೀಡಲಾಗುವುದು ಎಂದು ಡಿಆರ್‌ಡಿಒ ವಿಜ್ಞಾನಿ ತಿಳಿಸಿದ್ದಾರೆ.

## ವಿವಿಧ ಕ್ಷೇತ್ರಗಳಲ್ಲಿನ ಸಾಧಕರಿಗೆ ಸನ್ಮಾನ

ಬೆಂಗಳೂರು: ಇಂಜಿನಿಯರಿಂಗ್ ಕಾಲೇಜುಗಳನ್ನು ತಂತ್ರಜ್ಞಾನ ಚಟುವಟಿಕೆ ಕೇಂದ್ರಗಳನ್ನಾಗಿ ಮಾರ್ಪಾಡು ಮಾಡಲು ಅಗತ್ಯವಿರುವ ಅನುದಾನ ನೀಡಲು ಸರ್ಕಾರ ಬದ್ಧವಾಗಿದೆ ಎಂದು ಉಪ ಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥನಾರಾಯಣ ತಿಳಿಸಿದ್ದಾರೆ. ಭಾರತೀಯ ತಂತ್ರಜ್ಞಾನ ಕಾಂಗ್ರೆಸ್ (ಐಟಿಸಿ) ಸಂಸ್ಥೆ ನಿಮ್ಹಾನ್ಸ್ ಸಭಾಂಗಣದಲ್ಲಿ ಆಯೋಜಿಸಿರುವ 2 ದಿನಗಳ ರಾಷ್ಟ್ರೀಯ ತಂತ್ರಜ್ಞಾನ ಸಮಾವೇಶವನ್ನು ಬುಧವಾರ ಉದ್ಘಾಟಿಸಿ ಮಾತನಾಡಿದರು. ವಿವಿಧ ಕ್ಷೇತ್ರಗಳಲ್ಲಿನ ಸಾಧಕರನ್ನು ಸನ್ಮಾನಿಸಲಾಯಿತು. ಭಾರತೀಯ ತಂತ್ರಜ್ಞಾನ ಕಾಂಗ್ರೆಸ್ ಅಸೋಸಿಯೇಷನ್ ಅಧ್ಯಕ್ಷ ಎಲ್.ವಿ. ಮುರಳಿಕೃಷ್ಣ ರೆಡ್ಡಿ, ರಾಷ್ಟ್ರೀಯ ಸಲಹಾ ಸಮಿತಿ ಅಧ್ಯಕ್ಷ ಪ್ರೊ. ಆರ್.ಎಂ. ವಾಸಗಂ, ಇಸ್ರೋ ನಿರ್ದೇಶಕ ಡಾ.ಪಿ.ವಿ. ವೆಂಕಟಕೃಷ್ಣನ್ ಮತ್ತಿತರರಿದ್ದರು.

ಉದಯವಾಣಿ
ಗುರುವಾರ, ಸೆಪ್ಟೆಂಬರ್ 5, 2019

# ದೇಶದಲ್ಲಿ ತಂತ್ರಜ್ಞಾನದ ಕ್ರಾಂತಿಯಾಗಲಿ

## ಕಾಲೇಜುಗಳಲ್ಲಿ ತಂತ್ರಜ್ಞಾನ ಚಟುವಟಿಕೆ ಹೆಚ್ಚಿಸಲು ಡಿಸಿಎಂ ಡಾ. ಅಶ್ವತ್ಥನಾರಾಯಣ್ ಸಲಹೆ

ಬೆಂಗಳೂರು: ದೇಶದಲ್ಲಿ ಹಸಿರು ಕ್ರಾಂತಿಯಂತೆ ತಂತ್ರಜ್ಞಾನದ ಕ್ರಾಂತಿಯಾಗಬೇಕಿದೆ ಎಂದು ಉಪಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥನಾರಾಯಣ್ ಅಭಿಪ್ರಾಯಪಟ್ಟಿದ್ದಾರೆ.

ಭಾರತೀಯ ತಾಂತ್ರಿಕ ಕಾಂಗ್ರೆಸ್ ವತಿಯಿಂದ ಬುಧವಾರ ಏರ್ಪಡಿಸಿದ್ದ ಸಮಾವೇಶ ಉದ್ಘಾಟಿಸಿ ಮಾತನಾಡಿದ ಅವರು, ಸ್ವಾತಂತ್ರ್ಯ ಪೂರ್ವದಲ್ಲಿ ಆಹಾರ ಉತ್ಪಾದನೆ ಕಡಿಮೆ ಇತ್ತು. ಹಸಿರುಕ್ರಾಂತಿ ಪರಿಣಾಮ ಆಹಾರ ಉತ್ಪಾದನೆ ಹೆಚ್ಚಳವಾಯಿತು. ಅದೇ ರೀತಿ ಈಗ ತಂತ್ರಜ್ಞಾನದ ಕ್ರಾಂತಿಯಾಗಬೇಕಿದೆ. ಈ ನಿಟ್ಟಿನಲ್ಲಿ ಎಲ್ಲಾ ಎಂಜಿನಿಯರಿಂಗ್ ಕಾಲೇಜುಗಳು ತಂತ್ರಜ್ಞಾನ ಚಟುವಟಿಕೆ ಕೇಂದ್ರಗಳಾಗಬೇಕು ಎಂದು ತಿಳಿಸಿದರು.

ಇಸ್ರೇಲ್‌ನಲ್ಲಿ ಪ್ರಾಥಮಿಕ ಶಾಲಾ ಹಂತದಲ್ಲೇ ತಂತ್ರಜ್ಞಾನದ ಬಗ್ಗೆ ಶಿಕ್ಷಣ ನೀಡುತ್ತಾರೆ. ಅದಕ್ಕೆ ಅಲ್ಲಿನ ಮಕ್ಕಳು ಪ್ರೌಢಶಾಲಾ ಹಂತಕ್ಕೆ ಬರುವಷ್ಟರಲ್ಲಿ ಸಂಶೋಧನೆ ನಡೆಸಿ ಉಪಗ್ರಹಗಳನ್ನು ಕಂಡು ಹಿಡಿಯುತ್ತಿದ್ದಾರೆ. ಆದರೆ, ನಮ್ಮ ದೇಶದಲ್ಲಿ ಪದವಿ ಮತ್ತು ಎಂಜಿನಿಯರಿಂಗ್ ಮಟ್ಟದಲ್ಲಿ ತಂತ್ರಜ್ಞಾನದ ಅರಿವು ನೀಡಲಾಗುತ್ತದೆ ಎಂದು ಹೇಳಿದರು.

ಸಂಶೋಧನಾ ಕ್ಷೇತ್ರದಲ್ಲಿ ನಿರೀಕ್ಷಿತ ಮಟ್ಟದ ಆವಿಷ್ಕಾರಗಳು ನಡೆಯುತ್ತಿಲ್ಲ. ಎಂಜಿನಿಯರಿಂಗ್ ಕಾಲೇಜುಗಳು ತಂತ್ರಜ್ಞಾನ ಅಭಿವೃದ್ಧಿಯ ಕೇಂದ್ರಗಳಾಗಿ ಮಾರ್ಪಟ್ಟರೆ ದೇಶದ ಅಭಿವೃದ್ಧಿ ಸುಲಭವಾಗಲಿದೆ ಎಂದರು.



ಭಾರತೀಯ ತಾಂತ್ರಿಕ ಕಾಂಗ್ರೆಸ್ ವತಿಯಿಂದ ಬುಧವಾರ ಏರ್ಪಡಿಸಿದ್ದ ಸಮಾವೇಶದಲ್ಲಿ ಡಿಸಿಎಂ ಡಾ. ಸಿ.ಎನ್. ಅಶ್ವತ್ಥನಾರಾಯಣ್ ವೈಮಾನಿಕ ಮಾದರಿಗಳನ್ನು ವೀಕ್ಷಿಸಿದರು. ಇಸ್ರೇಲ್ ಬಾಹ್ಯಾಕಾಶ ಸಂಸ್ಥೆಯ ಸಹ ಸಂಸ್ಥಾಪಕ ಪ್ರೊ.ಚೈಮ್ ಇಶಾದ್ ಮತ್ತಿತರರು ಇದ್ದರು.

ಎಂಜಿನಿಯರಿಂಗ್ ವಿದ್ಯಾರ್ಥಿಗಳು 75 ಉಪಗ್ರಹಗಳನ್ನು ಅಭಿವೃದ್ಧಿ ಪಡಿಸಿರುವುದು ತಂತ್ರಜ್ಞಾನದ ಬೆಳವಣಿಗೆ ಸಂಕೇತವಾಗಿದೆ ಎಂದು ಹರ್ಷ ವ್ಯಕ್ತಪಡಿಸಿದರು. ಕಾರ್ಯಕ್ರಮದಲ್ಲಿ ಇಸ್ರೇಲ್ ಬಾಹ್ಯಾಕಾಶ ಸಂಸ್ಥೆಯ ಸಹ ಸಂಸ್ಥಾಪಕ ಪ್ರೊ.ಚೈಮ್ ಇಶಾದ್, ಭಾರತೀಯ ತಂತ್ರಜ್ಞಾನ ಕಾಂಗ್ರೆಸ್‌ನ ಅಧ್ಯಕ್ಷ ಡಾ.ಎಲ್.ವಿ. ಮುರಳಿಕೃಷ್ಣ ರೆಡ್ಡಿ ಸೇರಿದಂತೆ ಹಲವರು ಉಪಸ್ಥಿತರಿದ್ದರು.

ಕನ್ನಡಪ್ರಭ

# ಟೆಕ್ನಾಲಜಿ ಹಬ್ ಆರಂಭಿಸಿದರೆ ಸಹಕಾರ: ಡಿಸಿಎಂ

**ಬೆಂಗಳೂರು:** ರಾಜ್ಯದ ಎಂಜಿನಿಯರಿಂಗ್ ಹಾಗೂ ಪದವಿ ಕಾಲೇಜುಗಳಲ್ಲಿ ಟೆಕ್ನಾಲಜಿ ಹಬ್ ಮತ್ತು ಎಕ್ಸಲೇಟರ್ ಸೆಂಟರ್ (ವೇಗವರ್ಧಕ ಕೇಂದ್ರ) ಗಳನ್ನು ಆರಂಭಿಸಲು ಮುಂದಾದರೆ ರಾಜ್ಯ ಸರ್ಕಾರ ಸಹಕಾರ ನೀಡಲಿದೆ ಎಂದು ಉನ್ನತ ಶಿಕ್ಷಣ ಸಚಿವರೂ ಆದ ಉಪಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥ್ ನಾರಾಯಣ್ ಭರವಸೆ ನೀಡಿದ್ದಾರೆ.



ನಿಮ್ಹಾನ್ಸ್ ಕನ್ವೆಷನ್ ಸೆಂಟರ್‌ನಲ್ಲಿ 'ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್ - 2019' ಕಾರ್ಯಕ್ರಮವನ್ನು ಡಿಸಿಎಂ ಡಾ. ಸಿ.ಎನ್.ಅಶ್ವತ್ಥ್ ನಾರಾಯಣ ಉದ್ಘಾಟಿಸಿದರು.

ನಿಮ್ಹಾನ್ಸ್ ಕನ್ವೆಷನ್ ಸೆಂಟರ್‌ನಲ್ಲಿ ಬುಧವಾರ ಆಯೋಜಿಸಿದ್ದ 'ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್-2019' ಉದ್ಘಾಟಿಸಿ ಮಾತನಾಡಿದ ಅವರು, ಪ್ರತಿ ಎಂಜಿನಿಯರಿಂಗ್ ಕಾಲೇಜುಗಳು ಸಂಶೋಧನಾ ಚಟುವಟಿಕೆಗಳ ತಾಣವಾಗಬೇಕಿದೆ. ವಿದ್ಯಾರ್ಥಿಗಳ ಕಲಿಕಾ ದೃಷ್ಟಿಯಿಂದ ವಿಜ್ಞಾನ ಮತ್ತು ತಂತ್ರಜ್ಞಾನ, ಐಟಿ-ಬಿಟಿ ಅಭಿವೃದ್ಧಿ ಕುರಿತ ಕೆಲಸಗಳಿಗೆ ಸರ್ಕಾರ ಸಂಪೂರ್ಣ ಸಹಕಾರ ನೀಡಲಿದೆ. ಹಣಕಾಸು, ಮಾನವ ಸಂಪನ್ಮೂಲ ಮತ್ತು ಮೂಲ ಸೌಕರ್ಯ ಕಲ್ಪಿಸಲು ಸಹ ಮುಂದಾಗಲಿದೆ. ಆವಿಷ್ಕಾರ ಮತ್ತು ಸಂಶೋಧನೆಗೆ ಹೆಚ್ಚೆಚ್ಚು ಆದ್ಯತೆ ನೀಡಬೇಕಿದೆ. ಪ್ರಸ್ತುತ ದಿನಗಳಲ್ಲಿ ಕೈಗಾರಿಕೆ, ಆಡಳಿತ, ಕೃಷಿ ಮತ್ತು ಸಂಶೋಧನಾ ಕ್ಷೇತ್ರ ಸೇರಿದಂತೆ ಪ್ರತಿ ಕ್ಷೇತ್ರ ಗಳಲ್ಲಿ ತಂತ್ರಜ್ಞಾನವನ್ನು ಹೆಚ್ಚಾಗಿ ಬಳಸಲಾಗುತ್ತಿದೆ ಎಂದರು.

ಎಂಜಿನಿಯರಿಂಗ್, ತಂತ್ರಜ್ಞಾನ, ಬಾಹ್ಯಾಕಾಶ, ವೈದ್ಯಕೀಯ ಸೇರಿದಂತೆ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಕೊಡುಗೆ ನೀಡಿರುವ ಸಾಧಕರನ್ನು ಸನ್ಮಾನಿಸಲಾಯಿತು.

ಇಸ್ರೇಲ್ ಬಾಹ್ಯಾಕಾಶ ಸಂಸ್ಥೆ ಸಹ ಸಂಸ್ಥಾಪಕ ಪ್ರೊ.ಚಾಮ್ ಇಷೇಡ್, ಎನ್‌ಆರ್‌ಎಎ ಸಿಇಒ ಡಾ.ಅಶೋಕ್ ದಳವಾಯಿ, ಇಸ್ರೋ ಸಿಬಿಪಿಒ ನಿರ್ದೇಶಕ ಡಾ.ವೆಂಕಟಕೃಷ್ಣನ್ ಇದ್ದರು.

ಹೊಸ ದಿಗಂತ

ಗುರುವಾರ
5 ಸೆಪ್ಟೆಂಬರ್ 2019

## ವಿದ್ಯಾರ್ಥಿಗಳಲ್ಲಿ ಉಪಗ್ರಹ ಸಿದ್ಧಪಡಿಸುವ ಕೌಶಲ್ಯ: ಉಪಮುಖ್ಯಮಂತ್ರಿ ಡಾ. ಅಶ್ವತ್ಥ ನಾರಾಯಣ ಮೆಚ್ಚುಗೆ

# ನಿಮ್ಹಾನ್ಸ್ ಆವರಣದಲ್ಲಿ ಭಾರತೀಯ ತಂತ್ರಜ್ಞಾನ ಸಮ್ಮೇಳನ

**ಬೆಂಗಳೂರು:** ವಿದ್ಯಾರ್ಥಿಗಳು ಉಪಗ್ರಹಗಳನ್ನು ಸಿದ್ಧಪಡಿಸಿ ಉಡಾವಣೆಗೆ ಮುಂದಾಗುತ್ತಿರುವುದು ದೇಶವೇ ಹೆಮ್ಮೆ ಪಡುವ ವಿಚಾರವಾಗಿದ್ದು, ಇದಕ್ಕೆ ಭಾರತೀಯ ತಂತ್ರಜ್ಞಾನ ಕಾಂಗ್ರೆಸ್ ಒಕ್ಕೂಟ ಬೆಂಬಲ ನೀಡುತ್ತಿದೆ ಎಂದು ಉಪ ಮುಖ್ಯಮಂತ್ರಿ ಡಾ. ಅಶ್ವತ್ಥ ನಾರಾಯಣ ಸಂತಸ ವ್ಯಕ್ತಪಡಿಸಿದರು.

ನಗರದ ನಿಮ್ಹಾನ್ಸ್ ಆವರಣದಲ್ಲಿ ಮಾನವ ತಂತ್ರಜ್ಞಾನ ಹಾಗೂ ಭವಿಷ್ಯದ ಬುದ್ಧಿಮತ್ತೆ ವಿಚಾರಗಳ ಕುರಿತು 2 ದಿನದ 7ನೇ ಭಾರತೀಯ ತಂತ್ರಜ್ಞಾನ ಸಮ್ಮೇಳನ ಉದ್ಘಾಟಿಸಿ ಮಾತನಾಡಿದರು.

ಬೆಂಗಳೂರು ವಿಜ್ಞಾನ ಮತ್ತು ತಂತ್ರಜ್ಞಾನದ ತವರಾಗಿದೆ. ಹತ್ತಾರು ಅನ್ವೇಷಣೆ ಮತ್ತು ಅಭಿವೃದ್ಧಿ ಕೆಲಸ ನಡೆಯುತ್ತಿವೆ. ವಿಶ್ವದ ಹಲವು ಹೆಸರಾಂತ ತಂತ್ರಜ್ಞಾನ ಆಧಾರಿತ ಸಂಸ್ಥೆಗಳ ಕೇಂದ್ರಗಳು ಇಲ್ಲಿವೆ. ದೇಶವನ್ನು



ಅಭಿವೃದ್ಧಿಯ ಪಥದಲ್ಲಿ ಮುನ್ನಡೆಸಲು ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಸದಾ ಹೊಸತನ್ನು ಅನ್ವೇಷಿಸುವುದು ಅಗತ್ಯ. ಯುವಜನತೆ ವೈಜ್ಞಾನಿಕವಾಗಿ ಆವಿಷ್ಕಾರ ಹುಟ್ಟುಹಾಕುತ್ತಿದ್ದು ದೇಶದ ಅಭಿವೃದ್ಧಿಯ ದಿಕ್ಸೂಚಿಯಾಗಿದೆ ಎಂದರು.

ಸಮಾವೇಶ ಪ್ರತಿಭೆಗಳ ಅನಾವರಣಕ್ಕೆ ಪೂರಕವಾಗಿ ಕೆಲಸ ಮಾಡುತ್ತಿದೆ. ವಿದ್ಯಾರ್ಥಿಗಳ ಶೈಕ್ಷಣಿಕರ ಪ್ರಗತಿಗೆ ಇಂಥ ಕಾರ್ಯಕ್ರಮಗಳು ಅತ್ಯವಶ್ಯಕ. ದೇಶದ 75 ಇಂಜಿನಿಯರಿಂಗ್ ಕಾಲೇಜುಗಳ ವಿದ್ಯಾರ್ಥಿಗಳು ಉಪಗ್ರಹಗಳನ್ನು ತಯಾರಿಸಿ, ಅವರ ಉಡಾವಣೆಗೆ ಸಿದ್ಧತೆ ನಡೆಸುತ್ತಿರುವುದು ಉತ್ತಮ ಬೆಳವಣಿಗೆ. ಇದಕ್ಕೆ ಅಗತ್ಯ ತಯಾರಿ ನಡೆಸುತ್ತಿರುವ ಒಕ್ಕೂಟದ ಕಾರ್ಯ ಪ್ರಶಂಸನೀಯ ಎಂದರು.

ಇಸ್ರೇಲ್‌ನ ಪ್ರೌಢಶಾಲಾ ಮಕ್ಕಳು ಉಪಗ್ರಹಗಳನ್ನು ತಯಾರಿಸುತ್ತಿವೆ. ಆದರೆ ನಾವು ಕಾಲೇಜಿನಲ್ಲಿ ಈ ಬಗ್ಗೆ ಮಾತನಾಡುತ್ತಿದ್ದೇವು. ನಾಡಿನ ಇಂಜಿನಿಯರಿಂಗ್ ಕಾಲೇಜುಗಳನ್ನು ತಂತ್ರಜ್ಞಾನದ ತೊಟ್ಟಿಲನ್ನಾಗಿ ತಯಾರಿಸಲು ಸಹಕರಿಸಬೇಕು. ಆಡಳಿತ ಮಂಡಳಿ ತಂತ್ರಜ್ಞಾನದ ಅಭಿವೃದ್ಧಿಗೆ ಶ್ರಮಿಸಬೇಕು ಎಂದರು.

ಸಮಾವೇಶದ ಅಧ್ಯಕ್ಷ ಡಾ. ಎಲ್. ವಿ. ಮುರಳಿಕೃಷ್ಣ ರೆಡ್ಡಿ, ಡಾ.ವ್ರಾಡೇ ಪಿ.ಕೃಷ್ಣ, ಡಾ. ಅಶೋಕ್ ದಳವಾಯಿ, ಡಾ.ಪಿ.ವಿ. ವೆಂಕಟಕೃಷ್ಣನ್, ನಿವೃತ್ತ ಬ್ರಿಗೇಡಿಯರ್ ಜನರಲ್, ಪ್ರೊ. ಚೈಮ್ ಎಷದ್, ಪ್ರೊ.ಆರ್.ಎಂ. ವಾಸಗಂ, ಡಾ. ಕೆ. ಗೋಪಾಲಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

### ಪ್ರಶಸ್ತಿ ಪ್ರದಾನ

ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವ ಡಾ.ಬಿ.ವಿ.ಎ.ರಾವ್, ಪ್ರೊ. ಚೈಮ್ ಎಷದ್, ಪ್ರೊ. ಎಂ.ಆರ್.ರಮೇಶ್ ಅವರಿಗೆ ಜೀವಮಾನ ಸಾಧನೆಗೆ ಪ್ರಶಸ್ತಿ ನೀಡಲಾಯಿತು. ಡಾ. ಜಿ.ಕೆ. ವಸಂತ್ ಕುಮಾರ್, ಡಾ. ಮೆಕ್ ಎರೈಲ್, ಡಾ. ಅಶ್ವತ್ಥನಾರಾಯಣ ಸ್ವಾಮಿ, ಡಾ. ಎನ್. ಕೃಷ್ಣಸ್ವಾಮಿ, ಮೋಹನ್ ನಗ್ನಾನಿ, ಡಾ. ಕೆ ಬ್ರಹ್ಮರಾಜು ಮತ್ತು ಎನ್‌ಟಿಟಿಎಫ್ ಇಂಡಿಯಾ ಸಂಸ್ಥೆಗಳಿಗೆ ಟೆಕ್ನಾಲಜಿ ಎಕ್ಸಲೆನ್ಸ್ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಕರ್ನಾಟಕ 5 ಸೆಪ್ಟೆಂಬರ್ 2019

# ಎಂಜಿನಿಯರಿಂಗ್ ಕಾಲೇಜುಗಳಿಗೆ ಅಗತ್ಯ ತಂತ್ರಜ್ಞಾನ ಸೌಲಭ್ಯ: ಡಿಸಿಎಂ



7 ನೇ ಭಾರತೀಯ ತಂತ್ರಜ್ಞಾನ ಕಾಂಗ್ರೆಸ್ ಸಮಾವೇಶದಲ್ಲಿ ಡಿಸಿಎಂ ಡಾ.ಸಿ.ಎನ್. ಅಶ್ವತ್ಥನಾರಾಯಣ ಪಾಲ್ಗೊಂಡಿದ್ದರು.

**ಬೆಂಗಳೂರು:** ಪ್ರತಿ ಎಂಜಿನಿಯರಿಂಗ್ ಕಾಲೇಜುಗಳನ್ನು ತಂತ್ರಜ್ಞಾನ ಚಟುವಟಿಕೆಗಳ ಕೇಂದ್ರವನ್ನಾಗಿಸುವ ದಿಸೆಯಲ್ಲಿ ಅಗತ್ಯ ಸೌಲಭ್ಯಗಳನ್ನು ಕಲ್ಪಿಸಲು ಸರಕಾರ ಬದ್ಧವಾಗಿದೆ ಎಂದು ಉಪ ಮುಖ್ಯಮಂತ್ರಿ ಡಾ.ಸಿ.ಎನ್. ಅಶ್ವತ್ಥನಾರಾಯಣ ಭರವಸೆ ನೀಡಿದರು. ನಗರದ ನಿಮ್ಹಾನ್ಸ್ ಕನ್ವೆನ್ಷನ್ ಸಭಾಂಗಣದಲ್ಲಿ ಬುಧವಾರ ಹಮ್ಮಿಕೊಂಡಿದ್ದ ಏಳನೇ ಭಾರತೀಯ ವಿಜ್ಞಾನ ಕಾಂಗ್ರೆಸ್ ಸಮಾವೇಶವನ್ನು ಉದ್ಘಾಟಿಸಿ ಅವರು ಮಾತನಾಡಿದರು.

''ರಾಜ್ಯ ಸೇರಿದಂತೆ ದೇಶದ ಎಲ್ಲ ಎಂಜಿನಿಯರಿಂಗ್ ಕಾಲೇಜುಗಳು ತಂತ್ರಜ್ಞಾನ ಚಟುವಟಿಕೆ ಹಾಗೂ ಅಭಿವೃದ್ಧಿ ಕೇಂದ್ರಗಳಾಗಿ ಬದಲಾಗಬೇಕು. ಈ ಹಿನ್ನೆಲೆಯಲ್ಲಿ ಎಂಜಿನಿಯರಿಂಗ್ ಕಾಲೇಜುಗಳ ಅಭಿವೃದ್ಧಿಗೆ ಅಗತ್ಯವಿರುವ ಅನುದಾನ, ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರ ಜತೆಗೆ, ಬೋಧಕ ಹಾಗೂ ಬೋಧಕರೇತರ ಸೇವೆ ಕಲ್ಪಿಸಲು ಪ್ರಯತ್ನಿಸಲಾಗುವುದು'' ಎಂದು ಸಚಿವರು ಆಶ್ವಾಸನೆ ನೀಡಿದರು.

ಸಂಜೆವಾಣಿ

ಬುಧವಾರ, 4 ಸೆಪ್ಟೆಂಬರ್ 2019

# ಇಂಜಿನಿಯರಿಂಗ್ ಕಾಲೇಜುಗಳಿಗೆ ತಂತ್ರಜ್ಞಾನ ಸೌಲಭ್ಯ ಸರ್ಕಾರ ಬದ್ಧ

ಬೆಂಗಳೂರು, ಸೆ. 4– ಪ್ರತಿ ಇಂಜಿನಿಯರಿಂಗ್ ಕಾಲೇಜುಗಳನ್ನು ತಂತ್ರಜ್ಞಾನ ಚಟುವಟಿಕೆ ಕೇಂದ್ರವನ್ನಾಗಿಸುವ ನಿಟ್ಟಿನಲ್ಲಿ ಅಗತ್ಯವಿರುವ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ಬದ್ಧವಾಗಿದೆ ಎಂದು ಉಪಮುಖ್ಯಮಂತ್ರಿ ಡಾ. ಅಶ್ವತ್ಥ ನಾರಾಯಣ್ ಹೇಳಿದರು.

ನಗರದ ನಿಮ್ಹಾನ್ಸ್ ಕನ್ವೆನ್ಷನ್ ಸಭಾಂಗಣದಲ್ಲಿ ಏರ್ಪಡಿಸಿದ್ದ 7ನೇ ಭಾರತೀಯ ತಂತ್ರಜ್ಞಾನ ಕಾಂಗ್ರೆಸ್ ಸಮಾವೇಶ ಉದ್ಘಾಟಿಸಿ ಅವರು ಮಾತನಾಡಿದರು.

ರಾಜ್ಯ ಸೇರಿದಂತೆ ದೇಶದ ಎಲ್ಲ ಇಂಜಿನಿಯರಿಂಗ್ ಕಾಲೇಜುಗಳು ತಂತ್ರಜ್ಞಾನ ಚಟುವಟಿಕೆ ಹಾಗೂ ಅಭಿವೃದ್ಧಿ ಕೇಂದ್ರಗಳಾಗಿ ಬದಲಾಗಬೇಕು.

ಇಂಜಿನಿಯರಿಂಗ್ ಕಾಲೇಜುಗಳ ಅಭಿವೃದ್ಧಿಗೆ ಅಗತ್ಯವಿರುವ ಅನುದಾನ, ಮೂಲಭೂತ ಸೌಲಭ್ಯ, ಬೋಧಕ ಹಾಗೂ ಬೋಧಕೇತರ ಸಿಬ್ಬಂದಿ ಸೇರಿದಂತೆ ಇನ್ನಿತರ ಎಲ್ಲ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ಬದ್ಧವಾಗಿದೆ ಎಂದು ಭರವಸೆ ನೀಡಿದರು.

ದೇಶದ ಎಲ್ಲ ಇಂಜಿನಿಯರಿಂಗ್ ಕಾಲೇಜುಗಳಿಂದ ಇದುವರೆಗೂ 75 ಉಪಗ್ರಹಗಳನ್ನು ಸಿದ್ಧಪಡಿಸಲಾಗಿರುವುದು ತಂತ್ರಜ್ಞಾನ ಬೆಳವಣಿಗೆ ಸಂಕೇತ. ಆದರೆ, ಇಸ್ರೇಲ್‌ನಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಮಟ್ಟದಲ್ಲಿಯೇ ಉಪಗ್ರಹ ಅಭಿವೃದ್ಧಿಪಡಿಸುವ ಸಾಹಸಕ್ಕೆ ವಿದ್ಯಾರ್ಥಿಗಳು ಮುಂದಾಗಿದ್ದಾರೆ.

ನಮ್ಮ ರಾಜ್ಯ ಹಾಗೂ ದೇಶದಲ್ಲೂ ಸಹ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಮಟ್ಟದಲ್ಲಿಯೇ ಇಸ್ರೇಲ್ ಮಾದರಿಯಲ್ಲೇ ತಂತ್ರಜ್ಞಾನ ಅಭಿವೃದ್ಧಿಯಾಗಬೇಕು.

ದೇಶದಲ್ಲಿ ಪದವಿ ಹಾಗೂ ಇಂಜಿನಿಯರಿಂಗ್ ಕಾಲೇಜುಗಳೇ ತಂತ್ರಜ್ಞಾನ ಅಭಿವೃದ್ಧಿಯ ಕೇಂದ್ರಗಳಾಗಿ ಮಾರ್ಪಟ್ಟಲ್ಲಿ ದೇಶದ ಅಭಿವೃದ್ಧಿ ಸುಲಭವಾಗಲಿದೆ.

ಪ್ರಸ್ತುತ ಬೆಂಗಳೂರು ಸಣ್ಣ ಸಣ್ಣ ತಂತ್ರಜ್ಞಾನಗಳ ಕ್ಷೇತ್ರವಾಗಿ ಮಾರ್ಪಟ್ಟಿದೆ ಎಂದ ಅವರು, ಶಿಕ್ಷಣ ಕಲಿಕೆ ಗುಣಮಟ್ಟ ಅಭಿವೃದ್ಧಿಯಾಗಬೇಕಾದರೆ ಇದು ಅತ್ಯಗತ್ಯ ಎಂದರು.

ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ದೇಶದಲ್ಲಿ ಆಹಾರದ ಕೊರತೆಯಿತ್ತು. ಹಸಿರು ಕ್ರಾಂತಿ ಆರಂಭವಾದ ಮೇಲೆ ಕ್ರಮೇಣ ಆಹಾರ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಕೃಷಿಯಲ್ಲಿ ಬಳಸಿದ ತಾಂತ್ರಿಕತೆ ಕಾರಣವಾಯಿತು ಎಂದು ತಿಳಿಸಿದರು.

ತಂತ್ರಜ್ಞಾನ ಕ್ಷೇತ್ರದಲ್ಲಿ ಅನೇಕ ಸಾಧನೆಗಳನ್ನು ಮಾಡಿದ ಗಣ್ಯರನ್ನು ಸನ್ಮಾನಿಸಲಾಯಿತು. ವೇದಿಕೆಯಲ್ಲಿ ಇಸ್ರೇಲ್ ರಾಷ್ಟ್ರೀಯ ಪರಿಷತ್‌ನ ಸಹಸಂಸ್ಥಾಪಕ ಪ್ರೊ. ಚೈಮ್ ಇಷದ್, ಎನ್.ಆರ್.ಎ.ಎ.ನ ಸಿಇಒ ಡಾ. ಅಶೋಕ್ ದಾಲ್ವಾಯ್, ಸಿಬಿಪಿಒ ಡಾ. ವೆಂಕಟಕೃಷ್ಣನ್, ಪ್ರೊ. ಆರ್.ಎಂ. ವಾಸಗಾಂ ಹಾಗೂ ಇಸ್ರೇಲ್‌ನ ಪ್ರತಿನಿಧಿ ಉಪಸ್ಥಿತರಿದ್ದರು.



ನಗರದ ನಿಮ್ಹಾನ್ಸ್ ಸಭಾಂಗಣದಲ್ಲಿ ಆಯೋಜಿಸಿದ್ದ "7ನೇ ಭಾರತ ತಂತ್ರಜ್ಞಾನ ಕಾಂಗ್ರೆಸ್" ಸಮಾವೇಶವನ್ನು ಉಪಮುಖ್ಯಮಂತ್ರಿ ಅಶ್ವತ್ಥ ನಾರಾಯಣ ಅವರು ಉದ್ಘಾಟಿಸಿದರು.

ಈ ಸಂಜೆ

04-09-2019




ನಗರದಲ್ಲಿಂದು ನಡೆದ ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್‌ನ ಕಾರ್ಯಕ್ರಮದಲ್ಲಿ ಉಪ ಮುಖ್ಯಮಂತ್ರಿ ಹಾಗೂ ಐಟಿ ಬಿಟಿ ಸಚಿವ ಡಾ.ಸಿ.ಎನ್.ಅಶ್ವತ್ಥನಾರಾಯಣ ಸ್ಮರಣ ಸಂಚಿಕೆ ಬಿಡುಗಡೆ ಮಾಡಿದರು. ಅಧ್ಯಕ್ಷ ಡಾ.ಎಲ್.ಮುರುಳಿಕೃಷ್ಣ ರೆಡ್ಡಿ, ಡಾ.ವೂಡೆ ಪಿ.ಕೃಷ್ಣ, ಇಸ್ರೋದ ವಿಜ್ಞಾನಿ ಡಾ.ಪಿ.ವಿ.ವೆಂಕಟಕೃಷ್ಣನ್, ಇಸ್ರೇಲ್ ಸ್ಪೇಸ್ ಏಜೆನ್ಸಿಯ ಪ್ರೊ.ಚೈಮ್ ಇಸೀಡ್ ಮತ್ತಿತರರು ಇದ್ದರು.

ಕನ್ನಡಪ್ರಭ
ಸೋಮವಾರ 2.9.2019

ಅರಸು ಜಯಂತಿ

## ಗಾಂಧಿ, ದೇವರಾಜ ಅರಸು ಅವರ ಚಿಂತನೆಗಳ ನಡುವೆ ಹಲವು ಸಾಮ್ಯತೆ: ಡಾ.ವೂಡೆ

# ಹಿಂದುಳಿದ ಸಮುದಾಯ ಮುಖಂಡರು ರಾಜಕೀಯ ಪ್ರವೇಶಿಸಲು ಅರಸು ಕಾರಣ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ರಾಜ್ಯದಲ್ಲಿ ಹಿಂದುಳಿದ ಸಮುದಾಯಗಳ ಮುಖಂಡರು ರಾಜಕೀಯ ಕ್ಷೇತ್ರ ಪ್ರವೇಶಿಸಿ ಉನ್ನತ ಸ್ಥಾನಮಾನ ಹೊಂದಲು ಮಾಜಿ ಮುಖ್ಯಮಂತ್ರಿ ದಿವಂಗತ ದೇವರಾಜ ಅರಸು ಮೂಲಕಾರಣ ಎಂದು ಶಿಕ್ಷಣ ತಜ್ಞ ಡಾ.ವೂಡೆ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ಅರಸು ಸಾಹಿತ್ಯ ವೇದಿಕೆ ಕನ್ನಡ ಸಾಹಿತ್ಯ ಪರಿಷತ್ತಿನ ಕುವೆಂಪು ಸಭಾಂಗಣದಲ್ಲಿ ಆಯೋಜಿಸಿದ್ದ ದೇವರಾಜ ಅರಸು ಅವರ 104ನೇ ಜಯಂತಿ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಬಹುದೊಡ್ಡ ಹಾಗೂ ಮೇಲ್ವರ್ಗದ ಸಮುದಾಯಗಳಿಗೆ ಸೀಮಿತವಾಗಿದ್ದ ರಾಜಕಾರಣ ಹಿಂದುಳಿದ ವರ್ಗಗಳಿಗೆ ಅವಕಾಶ ದೊರೆಯಲು ಅರಸು ಪ್ರಮುಖ ಪಾತ್ರ ವಹಿಸಿದ್ದರು. ಇದೇ



ಕಾರಣದಿಂದ ಪ್ರಸ್ತುತ ರಾಜಕಾರಣದಲ್ಲಿ ದಲಿತರಿಗೂ ಉತ್ತಮ ಸ್ಥಾನ ಮಾನಗಳು ಲಭ್ಯವಾಗಿದೆ. ಅರಸು ಅವರು ಸಮಾಜದಲ್ಲಿ ಬಡವರ ಮತ್ತು ಶ್ರೀಮಂತರ ನಡುವಿನ ಅಂತರ ಹೋಗಲಾಡಿಸಲು ಶ್ರಮಿಸಿದ್ದರು. ಮುಖ್ಯಮಂತ್ರಿಯಾಗಿದ್ದಾಗ ಬಡವರಿಗೆ ಅನೇಕ ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿ ಮಾಡಿದ್ದರು. ಮಲ ಹೊರುವ ಪದ್ಧತಿ ನಿರ್ಮೂಲನೆಗೆ ಕಾಯ್ದೆ ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು ಎಂದು ಹೇಳಿದರು.

ಗಾಂಧೀಜಿ ಮತ್ತು ದೇವರಾಜ ಅರಸು ಅವರ ಚಿಂತನೆಗಳ ನಡುವೆ ಹಲವು ಸಾಮ್ಯತೆಗಳಿವೆ. ಅವರೂ ಸಹ ಗಾಂಧಿವಾದಿಗಳಾಗಿದ್ದರು. ಶಾಂತಿಯುತ ಕ್ರಾಂತಿ ನಡೆಯಬೇಕೆಂದು ಹೇಳುತ್ತಿದ್ದರು. ಬಡವರಿಗೆ ಭೂಮಿ, ವಿನೋಭಾವೆ ಅವರ ಭೂದಾನ ಚಳುವಳಿಯಲ್ಲಿ ಭಾಗವಹಿಸಿ, ಗ್ರಾಮವನ್ನೇ ದಾನ ಮಾಡುವ ಚಿಂತನೆ ಮಾಡಿದ್ದರು ಎಂದರು. ಲೇಖಕ ಸಿ.ಕೆ.ರಾಮೇಗೌಡ ಮಾತನಾಡಿ, ರಾಜ್ಯ ಸರ್ಕಾರ ದೇವರಾಜ ಅರಸು ಅವರ ಜಯಂತಿ ಘೋಷಿಸಿಲ್ಲ. ಮುಖ್ಯಮಂತ್ರಿಯಾಗಿ ಹಿಂದುಳಿದ ವರ್ಗಗಳಿಗಾಗಿ ಶ್ರಮಿಸಿದವರಿಗೆ ಸರ್ಕಾರಗಳು ಕನಿಷ್ಟ ಗೌರವ ನೀಡುತ್ತಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು. ಕಾರ್ಯಕ್ರಮದಲ್ಲಿ ನಗೆ ಸಾಹಿತಿ ಕೋ.ಲ.ರಂಗನಾಥರಾವ್ ಅವರಿಗೆ ಅರಸುಶ್ರೀ ಪ್ರಶಸ್ತಿ ಹಾಗೂ 10ಸಾವಿರ ನಗದು ನೀಡಿ ಗೌರವಿಸಲಾಯಿತು. ಹಿರಿಯ ಸಾಹಿತಿ ರಾಂ. ಕೆ.ಹನುಮಂತಯ್ಯ ಮತ್ತಿತರರಿದ್ದರು.

ಪ್ರಜಾವಾಣಿ

ಮಂಗಳವಾರ ● ಜುಲೈ 9, 2019

### ಬಾಲೆಹೊಸೂರಿನ ದಿಂಗಾಲೇಶ್ವರ ಸ್ವಾಮೀಜಿ ಹೇಳಿಕೆ

# ಗಾಂಧೀಜಿ ಆದರ್ಶ ಅಳವಡಿಸಿಕೊಳ್ಳಿ

ಪ್ರಜಾವಾಣಿ ವಾರ್ತೆ

ಹಾವೇರಿ: ಗಾಂಧೀಜಿ ಅವರ ಸಮರ್ಥ ನಾಯಕತ್ವ, ಲಕ್ಷಾಂತರ ಜನರ ತ್ಯಾಗ ಹಾಗೂ ಬಲಿದಾನದಿಂದ ದೇಶದ ಸ್ವಾತಂತ್ರ್ಯ ಹೋರಾಟ ಸಾಧ್ಯವಾಗಿದೆ ಎಂದು ಬಾಲೆಹೊಸೂರಿನ ದಿಂಗಾಲೇಶ್ವರ ಸ್ವಾಮೀಜಿ ಹೇಳಿದರು.

ನಗರದ ಹುಕ್ಕೇರಿ ಮಠದಲ್ಲಿ ಸೋಮವಾರ ನಡೆದ ಗಾಂಧೀಜಿ ಅವರ 150 ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ ರಾಷ್ಟ್ರಪಿತ ಗಾಂಧಿ, ಕಸ್ತೂರಬಾ ಹಾಗೂ ವಿನೋಬಾಜಿಯವರು ಸಂದೇಶವನ್ನು ವಿದ್ಯಾರ್ಥಿಗಳಿಗೆ ತಲುಪಿಸುವ ಕಾರ್ಯಕ್ರಮದ ಸಾನ್ನಿಧ್ಯ ವಹಿಸಿ ಅವರು ಮಾತನಾಡಿದರು.

ಗಾಂಧೀಜಿ ಅವರ ಸಾಧನೆಯಿಂದ ಇಂದು ಎಲ್ಲ ಇಲಾಖೆಗಳಲ್ಲಿ ಅವರ ಭಾವಚಿತ್ರ ಇರುತ್ತದೆ, ಅವರಂತೆಯೇ ಸಾಧನೆ ಮಾಡಿ ಯುವಜನರು ಮುಂದೆ ಬರಬೇಕು. ಸ್ವದೇಶಿ ವಸ್ತುಗಳ ಬಳಕೆ, ದೇಶದ ಅಭಿವೃದ್ಧಿಗೆ ಮುಂದಾಗಬೇಕು ಎಂದರು. ದೇಶದಲ್ಲಿನ ಅನಾಚಾರ, ಭ್ರಷ್ಟಾಚಾರ, ವಂಚನೆಯನ್ನು ಹೋಗಲಾಡಿಸಲು ಯುವಕರು ಮುಂದಾಗಬೇಕು. ಗಾಂಧೀಜಿಯವರ ಆದರ್ಶ ಬೆಳೆಸಿಕೊಳ್ಳಬೇಕು ಎಂದರು.

> ಪುರುಷ ಪ್ರಧಾನ ಸಮಾಜ ಅಸ್ತಿತ್ವದಲ್ಲಿದ್ದು, ಇದನ್ನು ಬದಲಾಯಿಸಬೇಕು. ಗಾಂಧೀಜಿ ಕನಸಿನಂತೆ ಮಹಿಳೆಯರಿಗೂ ಸ್ವಾತಂತ್ರ್ಯ ಸಿಗುವಂತಾಗಬೇಕು
>
> ಉಡೇಪಿ ಕೃಷ್ಣ
> ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಉಡೇಪಿ ಕೃಷ್ಣ ಮಾತನಾಡಿ, ಬುದ್ಧ, ಬಸವ, ಗಾಂಧಿ ಸಮಾಜದ ಏಳಿಗೆಗೆ ದುಡಿದಿದ್ದಾರೆ. ಅಲ್ಲದೇ, ಮಹಾತ್ಮ ಗಾಂಧೀಜಿ ಅವರ ನಾಯಕತ್ವ, ಲಕ್ಷಾಂತರ ಜನರ ತ್ಯಾಗ ಬಲಿದಾನದಿಂದ ಸ್ವಾತಂತ್ರ್ಯ ಸಿಕ್ಕಿದೆ ಎಂದರು.

ಜಿಲ್ಲಾಧಿಕಾರಿ ಕೃಷ್ಣ ಬಾಜಪೇಯಿ ಮಾತನಾಡಿ, ಇಂದಿನ ಜನರು ತಮಗೆ ಬೇಕಾದ ವಿಷಯವನ್ನು ಬಿಟ್ಟು, ಬೇರೆ ವಿಷಯಕ್ಕೆ ಹೆಚ್ಚು ಸಮಯ ವ್ಯರ್ಥ ಮಾಡುತ್ತಾರೆ. ಗಾಂಧೀಜಿ ತತ್ವಗಳಾದ ಸತ್ಯ, ಅಹಿಂಸೆ ದಾರಿಯಲ್ಲಿ ನಡೆಯಬೇಕು. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಬ್ರಿಟಿಷರು ತಪ್ಪು ಮಾಡುತ್ತಿದ್ದರು. ಅವರ ಹೃದಯ ಪರಿವರ್ತನೆಗೆ ಗಾಂಧೀಜಿ ಮುಂದಾಗುತ್ತಿದ್ದರು ಎಂದು ಹೇಳಿದರು.

ಹುಕ್ಕೇರಿಮಠದ ಸದಾಶಿವ ಸ್ವಾಮೀಜಿ, ಅಕ್ಕಿಆಲೂರು ವಿರಕ್ತಮಠದ ಶಿವಬಸವ ಸ್ವಾಮೀಜಿ, ಕೂಡಲ ಮಠದ ಗುರುನಂಜೇಶ್ವರ ಸ್ವಾಮೀಜಿ, ಎಸ್.ಪೀರಜಾದೆ, ಸತೀಶ ಕುಲಕರ್ಣಿ, ಎಚ್. ಹನುಮಂತಪ್ಪ, ಪದವಿಪೂರ್ವ ಡಿ.ಬಸವರಾಜ, ಎಸ್.ಎನ್.ಶಿವನಗೌಡ, ಶಿಕ್ಷಣ ಇಲಾಖೆ ಉಪನಿರ್ದೇಶಕ ಎಸ್. ... ಇದ್ದರು.



ಹಾವೇರಿಯ ಹುಕ್ಕೇರಿಮಠದಲ್ಲಿ ಸೋಮವಾರ ನಡೆದ ಗಾಂಧೀಜಿ ಅವರ 150 ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ ರಾಷ್ಟ್ರಪಿತ ಗಾಂಧಿ, ಕಸ್ತೂರಬಾ ಹಾಗೂ ವಿನೋಭಾಜಿ ಅವರ ಸಂದೇಶವನ್ನು ವಿದ್ಯಾರ್ಥಿಗಳಿಗೆ ತಲುಪಿಸುವ ಕಾರ್ಯಕ್ರಮದಲ್ಲಿ ಚನ್ನಮ್ಮ ಹಳ್ಳಿಕೇರಿ ಮಾತನಾಡಿದರು

### ‘ಗಾಂಧೀಜಿ ಅವಶ್ಯಕತೆ ಇನ್ನೂ ಇತ್ತು’

ಭಾರತದಲ್ಲಿ ಅಷ್ಟೇ ಅಲ್ಲದೇ ವಿದೇಶದಲ್ಲಿಯೂ ಇಂದು ಗಾಂಧೀಜಿ ಅವರ 150 ನೇ ಹುಟ್ಟುಹಬ್ಬವನ್ನು ಆಚರಿಸುತ್ತಿದ್ದಾರೆ. ಮಹಿಳೆಯರು ದೇಶವನ್ನು ಮುನ್ನಡೆಸಬೇಕು ಎಂದು ಅವರು ಹೇಳಿದರು. ದೇಶದ ಏಳಿಗೆಗೆ ಅವರ ಅವಶ್ಯಕತೆ ಇನ್ನೂ ಇತ್ತು ಎಂದು ಸ್ವಾತಂತ್ರ್ಯ ಹೋರಾಟಗಾರ್ತಿ ಚನ್ನಮ್ಮ ಹಳ್ಳಿಕೇರಿ ಹೇಳಿದರು.

ಈ ಸಂಜೆ

24-08-2019




ಶೇಷಾದ್ರಿಪುರಂ ಕಾನೂನು ಕಾಲೇಜಿನ ಹೊಸ ವಿದ್ಯಾರ್ಥಿಗಳ ಪುನರ್ಮನನ ಕಾರ್ಯಕ್ರಮದಲ್ಲಿ ವಿಧಾನಸಭೆ ಕಾರ್ಯದರ್ಶಿ ಎಂ.ಕೆ.ವಿಶಾಲಾಕ್ಷಿ, ಟ್ರಸ್ಟ್ ಅಧ್ಯಕ್ಷ ಕೆನ್ನಾರ್ ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ.ಕೃಷ್ಣ, ಗೌರ್ನಿಂಗ್ ಕೌನ್ಸಿಲ್ ಕೃಷ್ಣಸ್ವಾಮಿ ಪಾಲ್ಗೊಂಡಿದ್ದರು.

16-08-2019




ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ವತಿಯಿಂದ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ರಾಜ್ಯಸಭೆ ಸದಸ್ಯ ಡಾ. ಎಲ್.ಹನುಮಂತಯ್ಯ ಅವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಪ್ರಧಾನಕಾರ್ಯದರ್ಶಿ ಡಾ. ವೂಡೆ.ಪಿ.ಕೃಷ್ಣ ಮತ್ತಿತರರು ಹಾಜರಿದ್ದರು.


ಕನ್ನಡಪ್ರಭ

ಶನಿವಾರ 10.8.2019

# ನಗರ ಕಾರ್ಯಕ್ರಮಗಳು

■ **ಪೇಸರ್ ಫೌಂಡೇಷನ್:** 'ಎಜುಕೇಷನ್ ಮ್ಯಾನೇಜ್‌ಮೆಂಟ್ ರೆಪ್ರೆಸೆಂಟೇಟಿವ್ಸ್ ಮೀಟ್', ಉದ್ಘಾಟನೆ- ಸಂಸದ ತೇಜಸ್ವಿ ಸೂರ್ಯ, ಅಧ್ಯಕ್ಷತೆ- ಪೇಸರ್ ಫೌಂಡೇಷನ್ ಅಧ್ಯಕ್ಷ ಡಾ.ಟಿ.ವಿ.ರಾಜು, ವಿಷಯ ಮಂಡನೆ- ಬಿ.ಎಸ್.ರಾಮಪ್ರಸಾದ್, ಪ್ರೊ.ಕೆ.ಆರ್.ವೇಣುಗೋಪಾಲ, ಡಾ.ಪ್ರಾಡೇ ಪಿ.ಕೃಷ್ಣ, ಡಾ.ಶಕುಂತಲಾ ಕಾಟ್ರೆ, ಕಲ್ಪನಾ ಮೋಹನ್, ಸ್ಥಳ- ಸೆಮಿನಾರ್ ಹಾಲ್, ಆರ್.ವಿ. ದಂತ ಕಾಲೇಜು, ಜೆ.ಪಿ.ನಗರ 1ನೇ ಹಂತ, ಬೆ 10.30.

ಹೊಸ ದಿಗಂತ

ಬುಧವಾರ
7 ಆಗಸ್ಟ್ 2019

# ಜನನಾಯಕರ ಪಕ್ಷಾಂತರ ಪ್ರಜಾಪ್ರಭುತ್ವಕ್ಕೆ ಮಾಡಿದ ಅಪಮಾನ

**ಬೆಂಗಳೂರು:** ಇತ್ತೀಚಿನ ರಾಜಕೀಯ ಬೆಳವಣಿಗೆ ಚುನಾವಣಾ ಪ್ರಕ್ರಿಯೆಗೆ ಇಟ್ಟ ಕಪ್ಪುಚುಕ್ಕೆಯಂತೆ. ಜನರನ್ನು, ಪಕ್ಷವನ್ನೂ ಲೆಕ್ಕಿಸದೆ ಜನನಾಯಕರು ಪಕ್ಷಾಂತರ ಮಾಡುತ್ತಿದ್ದುದು ಪ್ರಜಾಪ್ರಭುತ್ವಕ್ಕೆ ಮಾಡಿದ ಅವಮಾನ ಎಂದು ವಿಧಾನಪರಿಷತ್‌ನ ಮಾಜಿ ಸದಸ್ಯ ಮೈಕೆಲ್ ಫೆರ್ನಾಂಡಿಸ್ ಅಭಿಪ್ರಾಯಪಟ್ಟರು.

ನಗರದ ಗಾಂಧೀ ಭವನದಲ್ಲಿ ಮಹಾದೇವಿ ತಾಯಿ ಸಂಸ್ಮರಣೆ ಹಾಗೂ ಕಿರು ಸಭಾಂಗಣ ಉದ್ಘಾಟಿಸಿ ಮಾತನಾಡಿದ ಅವರು, ಇಂದಿನ ವಿದ್ಯಾರ್ಥಿಗಳು ಭವಿಷ್ಯದಲ್ಲಿ ರಾಜಕೀಯಕ್ಕೆ ಬಂದು ಜನಸೇವೆಗಿಳಿಯಬೇಕೆಂಬ ಶಪಥ ಇಂದೇ ಮಾಡಿಕೊಳ್ಳಬೇಕು. ಭವಿಷ್ಯದ ಚುನಾವಣೆಯಲ್ಲಿ ನಿಮ್ಮ ಆಯ್ಕೆ ಹಣವೋ ಅಥವಾ ಜನವೋ ಎಂಬುದನ್ನು ಈಗಲೇ ನಿರ್ಧರಿಸಿಕೊಳ್ಳಬೇಕು ಎಂದರು.



ರಾಜಕೀಯವೆಂದರೆ ಕೊಳಕಲ್ಲ

ಪ್ರಜಾಪ್ರಭುತ್ವದಲ್ಲಿ ಸಮಕಾಲೀನ ಮೌಲ್ಯಗಳು ಎಂಬ ವಿಚಾರದ ಕುರಿತು ಮಾತನಾಡಿದ ವಿಧಾನಪರಿಷತ್ತಿನ ಮಾಜಿ ಸದಸ್ಯ ಎಂ.ಪಿ.ನಾಡಗೌಡ, ರಾಜಕೀಯ ಎಂದರೆ ಅದು ಕೊಳಕಲ್ಲ, ಇಂದಿನ ರಾಜಕೀಯ ಬೆಳವಣಿಗೆ ನೋಡಿ ಯುವಜನತೆ ಇದೇ ರಾಜಕೀಯ ಎಂದು ತಿಳಿದುಕೊಳ್ಳಬಾರದು. ರಾಜ್ಯಶಾಸ್ತ್ರ ಎಲ್ಲಾ ವಿಜ್ಞಾನಗಳಿಗಿಂತಲೂ ಶ್ರೇಷ್ಠವಾದುದು ಎಂದರು.

ರಾಜಕೀಯದಲ್ಲಿ ಮೌಲ್ಯಗಳು ಯಾವತ್ತೂ ಕುಗ್ಗಿಲ್ಲ. ಜನ ನಾಯಕರನ್ನು ಪ್ರಶ್ನೆ ಮಾಡಿದರೆ ಅವರೂ ಸರಳವಾಗಿರುತ್ತಾರೆ. ನಾವು ಜನ ನಾಯಕರನ್ನು ಪ್ರಶ್ನಿಸಿ ಪ್ರಜಾಪ್ರಭುತ್ವ ಉಳಿಸಿಕೊಳ್ಳಬೇಕು. ಇಲ್ಲವಾದಲ್ಲಿ ಪರಿಸ್ಥಿತಿ ಹದಗೆಡುತ್ತದೆ ಎಂದು ಎಚ್ಚರಿಸಿದರು.

ಸಮಾರಂಭದಲ್ಲಿ ಗಾಂಧಿ ಭವನ ಅಧ್ಯಕ್ಷ ವೂಡೆ.ಪಿ.ಕೃಷ್ಣ, ಪತಂಜಲಿ ಪ್ರಕಾಶ್ ಗುರೂಜಿ, ಶೇಷಾದ್ರಿಪುರ ಸಂಜೆ ಕಾಲೇಜು ಪ್ರಾಂಶುಪಾಲ ನೋಟ್ಕರ್ ಸತೀಶ್ ಉಪಸ್ಥಿತರಿದ್ದರು.

ಪ್ರಜಾವಾಣಿ

ಬುಧವಾರ • ಆಗಸ್ಟ್ 7, 2019

'ಪ್ರಜಾಪ್ರಭುತ್ವದಲ್ಲಿ ಸಮಕಾಲೀನ ಮೌಲ್ಯಗಳು' ಸಂವಾದ

# 'ಚುನಾವಣಾ ಪದ್ಧತಿಯ ಕಪ್ಪುಚುಕ್ಕೆ ಪಕ್ಷಾಂತರ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಜನರಿಂದ ಆಯ್ಕೆಯಾದವರು ಜನರನ್ನು ಲೆಕ್ಕಿಸದೇ ಹೋದರೆ, ಹಣವನ್ನು ಹಿಂಬಾಲಿಸಿದರೆ ಪ್ರಜಾಪ್ರಭುತ್ವಕ್ಕೆ ಮೌಲ್ಯವೇ ಇಲ್ಲದಂತಾಗುತ್ತದೆ. ಪಕ್ಷಾಂತರ ಎಂಬುದು ಚುನಾವಣಾ ಪದ್ಧತಿಯ ಕಪ್ಪುಚುಕ್ಕೆ ಇದ್ದಂತೆ' ಎಂದು ಹಿರಿಯ ರಾಜಕಾರಣಿ ಮೈಕಲ್ ಫರ್ನಾಂಡಿಸ್ ಅಭಿಪ್ರಾಯಪಟ್ಟರು.

ಗಾಂಧಿವಾದಿ ಮಹಾದೇವಿ ತಾಯಿ ಅವರ ಸ್ಮರಣೆಯ ಕಾರ್ಯಕ್ರಮದಲ್ಲಿ ಮಂಗಳವಾರ 'ಪ್ರಜಾಪ್ರಭುತ್ವದಲ್ಲಿ ಸಮಕಾಲೀನ ಮೌಲ್ಯಗಳು' ಕುರಿತು ಮಾತನಾಡಿದ ಅವರು, 'ಆಯಾರಾಮ್, ಗಯಾರಾಮ್‌ಗಳ ನಿಯಂತ್ರಣಕ್ಕಾಗಿಯೇ ಪಕ್ಷಾಂತರ ನಿಷೇಧ ಕಾಯ್ದೆಯನ್ನು ಜಾರಿಗೆ ತರಲಾಯಿತು. ಆದರೂ, ರಾಜೀನಾಮೆ ನೀಡಿ ಮತ್ತೆ ಚುನಾವಣೆಗೆ ಹೋಗುವ ಪ್ರವೃತ್ತಿ ಪ್ರಾರಂಭವಾಗಿದೆ' ಎಂದು ಬೇಸರ ವ್ಯಕ್ತಪಡಿಸಿದರು.

'ರಾಮಕೃಷ್ಣ ಹೆಗಡೆ ಮುಖ್ಯಮಂತ್ರಿಯಾಗಿದ್ದಾಗ ನನಗೆ ಕಾರ್ಮಿಕ ಸಚಿವ ಸ್ಥಾನ ನೀಡಲು ಮುಂದಾಗಿದ್ದರು. ಬಿಜೆಪಿ ಜೊತೆ ಮೈತ್ರಿ ಇದ್ದುದರಿಂದ ಮಂತ್ರಿಗಿರಿಗೆ ಪೈಪೋಟಿ ಏರ್ಪಟ್ಟಿತ್ತು. ಹಾಗಾಗಿ ನಾನು ಅದನ್ನು ನಿರಾಕರಿಸಿದ್ದೆ' ಎಂದರು.



ಗಾಂಧಿಭವನದ ಆವರಣದಲ್ಲಿ ಮಹಾದೇವಿ ತಾಯಿ ಕಿರು ಸಭಾಂಗಣವನ್ನು ಮಂಗಳವಾರ ಉದ್ಘಾಟಿಸಲಾಯಿತು. ಎಂ.ಪಿ.ನಾಡಗೌಡ (ಎಡದಿಂದ ಎರಡನೆಯವರು), ಮೈಕಲ್ ಫರ್ನಾಂಡೀಸ್, ಪತಂಜಲಿ ಯೋಗಾಶ್ರಮದ ಅಧ್ಯಕ್ಷ ಪ್ರಕಾಶ್ ಯೋಗಿ ಗುರೂಜಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ.ಪಿ.ಕೃಷ್ಣ, ರಾಮಕೃಷ್ಣ ಹೆಗಡೆ ರಾಷ್ಟ್ರೀಯ ಚಿಂತನಾ ವೇದಿಕೆ ಅಧ್ಯಕ್ಷ ಕೆ.ಎಸ್.ಸತ್ಯನಾರಾಯಣ್, ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಇದ್ದಾರೆ – ಪ್ರಜಾವಾಣಿ ಚಿತ್ರ

'ಕಾರ್ಮಿಕರ ಒಕ್ಕೂಟದ ಚುನಾವಣೆಗಳಲ್ಲಿಯೂ ಈಗ ಹಣದ ಆಟ ಶುರುವಾಗಿದೆ. ಮತ ಹಾಕುವುದಕ್ಕೆ ಮೊದಲು ಹಣ ಪಡೆದು, ಮತದಾನ ಮಾಡಿದ ವಿಡಿಯೊ ತೋರಿಸಿ ಮತ್ತೆ ಹಣ ಕೇಳುವಂತಹ ಬೆಳವಣಿಗೆಗಳು ನಡೆಯುತ್ತಿವೆ' ಎಂದರು.

'ಬಹುಸಂಖ್ಯಾತರು ಅಲ್ಪಸಂಖ್ಯಾತರನ್ನು ಯಾವ ರೀತಿ ಕಾಣುತ್ತಾರೆ ಎಂಬುದರ ಮೇಲೆ ಆ ದೇಶದ ನಾಗರಿಕತೆ ಎಂಥದ್ದು ಎಂಬುದು ತಿಳಿಯುತ್ತದೆ' ಎಂದು ಹೇಳಿದರು.

ಹಿರಿಯ ರಾಜಕಾರಣಿ ಎಂ.ಪಿ. ನಾಡಗೌಡ, 'ರಾಜಕಾರಣದಲ್ಲಿ ಮೌಲ್ಯಗಳು ಬದಲಾಗಿಲ್ಲ. ವ್ಯಕ್ತಿಗಳು ಅದನ್ನು ಹೊಲಸು ಮಾಡಿದ್ದಾರೆ' ಎಂದರು.

'ನೂರಾರು ವರ್ಷಗಳ ಹೋರಾಟದ ನಂತರ ಪ್ರಜಾಪ್ರಭುತ್ವ ಸಿಕ್ಕಿದೆ. ಆದರೆ, ಈಗಿನ ಬೆಳವಣಿಗೆಗಳನ್ನು ನೋಡಿ, ಇದೇ ರಾಜಕಾರಣ ಎಂದು ಯುವ ಸಮೂಹ ಭಾವಿಸಬಾರದು' ಎಂದು ಕಿವಿಮಾತು ಹೇಳಿದರು.

'ಮೀಸಲಾತಿ ಕುರಿತು ಈಗ ಅಪಪ್ರಚಾರ ನಡೆಯುತ್ತಿದೆ. ಆದರೆ, ಅದೊಂದು ಅವಕಾಶ ಅಷ್ಟೇ. ರಾಮಕೃಷ್ಣ ಹೆಗಡೆಯವರು ಮಹಿಳೆಯರಿಗೆ ರಾಜಕೀಯದಲ್ಲಿ ಶೇ 25ರಷ್ಟು ಮೀಸಲಾತಿ ನೀಡಲು ಮುಂದಾಗಿದ್ದರು. ಆಗ, ಮಹಿಳೆಯರು ರಾಜಕೀಯಕ್ಕೆ ಬಂದರೆ ಅವರ ಚಾರಿತ್ರ್ಯ ಹಾಳಾಗುವ ಸಾಧ್ಯತೆ ಇದೆ ಎಂದು ಪುರುಷರು ಆಕ್ಷೇಪ ವ್ಯಕ್ತಪಡಿಸಿದ್ದರು. ಮಹಿಳೆಯರಿಗೆ ಮಾತ್ರ ಚಾರಿತ್ರ್ಯ ಅನ್ವಯಿಸುತ್ತದೆಯೇ, ಪುರುಷರಿಗೆ ಅನ್ವಯಿಸುವುದಿಲ್ಲವೆ ಎಂದು ಹೆಗಡೆ ಪ್ರಶ್ನಿಸಿದ್ದರು' ಎಂದು ನಾಡಗೌಡ ನೆನಪು ಮಾಡಿಕೊಂಡರು.

ಗಾಂಧಿಭವನದ ಆವರಣದಲ್ಲಿ ನಿರ್ಮಿಸಿರುವ ಕಿರು ಸಭಾಂಗಣವನ್ನು ಉದ್ಘಾಟಿಸಲಾಯಿತು.

## 'ಮಲ ಸ್ವಚ್ಛಗೊಳಿಸಿದ್ದ ಹೆಗಡೆ'

'ಗಾಂಧಿ ಮೌಲ್ಯಗಳ ಅಧ್ಯಯನಕ್ಕಾಗಿ ರಾಮಕೃಷ್ಣ ಹೆಗಡೆಯವರು ವಿನೋಬಾ ಭಾವೆಯವರ ಆಶ್ರಮಕ್ಕೆ ತೆರಳಿದ್ದರು. ಮಲ ಸ್ವಚ್ಛಗೊಳಿಸುವ ಕಾರ್ಯಕ್ಕೆ ಹೆಗಡೆಯವರನ್ನು ಭಾವೆ ನಿಯೋಜಿಸಿದ್ದರು' ಎಂದು ನಾಡಗೌಡ ಸ್ಮರಿಸಿದರು.

'ಹೆಗಡೆ ಒಂದೆರಡು ವಾರಗಳ ಕಾಲ ಈ ಕಾರ್ಯವನ್ನು ಯಾವ ಮುಜುಗರವಿಲ್ಲದೆಯೇ ನಿರ್ವಹಿಸಿದರು. ನೀವು ಬ್ರಾಹ್ಮಣರಾಗಿರುವುದರಿಂದ 'ನಾವೇ ಶ್ರೇಷ್ಠ' ಎಂಬ ಭಾವನೆ ನಿಮ್ಮಲ್ಲಿರುತ್ತದೆ. ಅದಕ್ಕೆ ಈ ಕೆಲಸ ಮಾಡಿಸಿದೆ ಎಂದು ಹೇಳಿದ್ದ ಭಾವೆಯವರು, ಹೆಗಡೆಯವರನ್ನು ತಮ್ಮ ಆಶ್ರಮದಲ್ಲಿ ಉಳಿಸಿಕೊಂಡರು. ಸ್ವಚ್ಛ ಭಾರತ ಅಭಿಯಾನ ಆಗಲೇ ಚಾಲ್ತಿಯಲ್ಲಿತ್ತು' ಎಂದು ಹೇಳಿದರು.

'ಹೆಗಡೆಯವರು ಮುಂದೆ ಗಾಂಧಿ, ಭಾವೆಯವರ ಮೌಲ್ಯಗಳಿಗೆ ಪೂರಕವಾಗಿಯೇ ಆಡಳಿತ ನಡೆಸಿದರು' ಎಂದು ನಾಡಗೌಡ ಹೇಳಿದರು.

ಸುವರ್ಣ
ಟೈಮ್ಸ್ ಆಫ್ ಕರ್ನಾಟಕ

ಬುಧವಾರ, 7 ಆಗಸ್ಟ್ 2019



## ಉದ್ಘಾಟನೆ...

ಬೆಂಗಳೂರು: ನಗರದ ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ಪ್ರಥಮ ಪಿಯು ತರಗತಿಗಳನ್ನು, ಕರ್ನಾಟಕ ಗಾಂಧಿ ನಿಧಿ, ಸ್ಮಾರಕ ನಿಧಿ ಉಪಾಧ್ಯಕ್ಷರಾದ ವಿ. ಎನ್. ತಿಪ್ಪನಗೌಡ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಧರ್ಮದರ್ಶಿ ಜಿ. ಪರಮಶಿವಯ್ಯ ಹಾಗೂ ಪ್ರಾಂಶುಪಾಲರಾದ ಪ್ರೊ. ಆರ್. ಮಹಾಲಕ್ಷ್ಮಿ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ ಬುಧವಾರ, 7 ಆಗಸ್ಟ್ 2019



ಶೇಷಾದ್ರಿಪುರ ಕಾಲೇಜು ಹಾಗೂ ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯ ಆಯೋಜಿಸಿದ್ದ ಜಲಶಕ್ತಿಗಾಗಿ ಬೆಂಗಳೂರಿನಿಂದ ಮೈಸೂರಿಗೆ ಜನಶಕ್ತಿ ಸೈಕಲ್ ಜಾಥಾಗೆ ನಗರ ಜಿಲ್ಲಾಧಿಕಾರಿ ಶ್ರೀನಿವಾಸ್ ಚಾಲನೆ ನೀಡಿದರು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ, ಎನ್‌ಎಸ್‌ಎಸ್ ರಾಜ್ಯ ಸಂಪರ್ಕಾಧಿಕಾರಿ ಗಣನಾಥ ಶೆಟ್ಟಿ ಎಕ್ಕಾರು ಹಾಜರಿದ್ದರು.

ಪ್ರಜಾವಾಣಿ ಬುಧವಾರ • ಆಗಸ್ಟ್ 7, 2019

2

# 'ಶೂನ್ಯ ಬಂಡವಾಳ ಕೃಷಿ ಮಾರಕ'

ಬೆಂಗಳೂರು: 'ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಅವರು ಮಂಡಿಸಿದ ಬಜೆಟ್‌ನಲ್ಲಿ 'ಶೂನ್ಯ ಬಂಡವಾಳ ಕೃಷಿ'ಗೆ ಹೆಚ್ಚಿ ಆದ್ಯತೆ ನೀಡಿದ್ದಾರೆ. ಈ ಪದ್ಧತಿಯನ್ನು ಅನುಸರಿಸುವುದು ರೈತಾಪಿ ವರ್ಗಕ್ಕೆ ಮಾರಕವಾಗಲಿದೆ' ಎಂದು ನವಧಾನ್ಯ ಟ್ರಸ್ಟ್‌ನ ವಂದನಾ ಶಿವ ಅಭಿಪ್ರಾಯಪಟ್ಟರು.

ಮಂಗಳವಾರ ಇಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು,'ಕೃಷಿಕರು ಸಂಕಷ್ಟದ ಪರಿಸ್ಥಿತಿ ಎದುರಿಸುತ್ತಿದ್ದಾರೆ. ರಾಸಾಯನಿಕ ಕೃಷಿ ಪದ್ಧತಿಗೆ ಹೊಂದಿಕೊಂಡಿರುವ ದೇಶದ ಕೃಷಿ ಭೂಮಿಯಲ್ಲಿ ನೈಸರ್ಗಿಕ ಕೃಷಿ ಮಾಡುವುದು ಸವಾಲಿನ ಕೆಲಸ. ಮತ್ತೊಂದೆಡೆ ದೇಶದ ಎಲ್ಲ ಪ್ರದೇಶದಲ್ಲಿ ಈ ಮಾದರಿಯ ಕೃಷಿ ಮಾಡಲು ಭೂಮಿ ಸೂಕ್ತವಾಗಿಲ್ಲ' ಎಂದರು.

'ಈ ಬಗ್ಗೆ ತಜ್ಞರೊಂದಿಗೆ ದೊಡ್ಡ ಮಟ್ಟದಲ್ಲಿ ಚರ್ಚೆ ಆಗಬೇಕು ಬಳಿಕ ಶೂನ್ಯ ಬಂಡವಾಳ ಕೃಷಿ ಬೇಕೇ ಬೇಡವೇ ಎಂಬುದರ ಬಗ್ಗೆ ಕೇಂದ್ರ ಸರ್ಕಾರ ಗಮನ ಹರಿಸಬೇಕು' ಎಂದರು.

# 'ಜಲಶಕ್ತಿಗಾಗಿ ಜನಶಕ್ತಿ' ಜಾಥಾ



ಬೆಂಗಳೂರು: 'ನೀರಿನ ಸಂರಕ್ಷಣೆ' ಕುರಿತು ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಸಲುವಾಗಿ ಶೇಷಾದ್ರಿಪುರ ಕಾಲೇಜು ಹಾಗೂ ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯದ ಆಶ್ರಯದಲ್ಲಿ 'ಬೆಂಗಳೂರಿನಿಂದ ಮೈಸೂರಿನವರೆಗೆ ಸೈಕಲ್ ಜಾಥಾ'ಗೆ ಬೆಂಗಳೂರು ನಗರ ಜಿಲ್ಲಾಧಿಕಾರಿ ಶ್ರೀನಿವಾಸ್ ಸೋಮವಾರ ಚಾಲನೆ ನೀಡಿದರು.

ಬಳಿಕ ಮಾತನಾಡಿ, 'ನೀರಿನ ಸಂರಕ್ಷಣೆ ಬಗ್ಗೆ ಜಾಗೃತಿ ಮೂಡಿಸಲು ಕೇಂದ್ರ ಸರ್ಕಾರ ಮುಂದಾಗಿದ್ದು, ಬೆಂಗಳೂರು ನಗರವನ್ನು ಆಯ್ಕೆ ಮಾಡಲಾಗಿದೆ. ನೀರಿನ ಅನಿವಾರ್ಯತೆ ಹಾಗೂ ಹನಿ ನೀರು ಶೇಖರಣೆ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವುದು ನಮ್ಮ ಉದ್ದೇಶ' ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ಅಧ್ಯಕ್ಷ ವೂಡೇ ಪಿ.ಕೃಷ್ಣ, 'ಜಲ ಸಂಪನ್ಮೂಲವನ್ನು ಮುಂದಿನ ಪೀಳಿಗೆಗೆ ಉಳಿಸಬೇಕು. ಈ ನಿಟ್ಟಿನಲ್ಲಿ ಸೈಕಲ್ ಜಾಥಾ ಸಾಮಾಜಿಕ ಸಂದೇಶವನ್ನು ಹೊತ್ತು ಜನರಲ್ಲಿ ನೀರಿನ ಸಂರಕ್ಷಣೆ ಬಗ್ಗೆ ಅರಿವು ಮೂಡಿಸಲಿದೆ' ಎಂದರು. ಎನ್‌ಎಸ್‌ಎಸ್ ರಾಜ್ಯ ಸಂಪರ್ಕಾಧಿಕಾರಿ ಗಣನಾಥ ಶೆಟ್ಟಿ ಎಕ್ಕಾರು, ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯದ ಎನ್‌ಎಸ್‌ಎಸ್ ಸಂಯೋಜನಾಕಾರಿ ಗೋವಿಂದೇಗೌಡ, ಆಡಳಿತ ಸಲಹಾ ಮಂಡಳಿ ಅಧ್ಯಕ್ಷ ಎಂ.ಎಸ್.ನಟರಾಜ್, ಪ್ರಾಂಶುಪಾಲ ಅನುರಾಧ ರಾಯ್ ಭಾಗವಹಿಸಿದ್ದರು.

ಸಂಜೆವಾಣಿ

ಮಂಗಳವಾರ, 6 ಆಗಸ್ಟ್ 2019



ನಗರದ ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ಪ್ರಥಮ ಪಿಯು ತರಗತಿಗಳನ್ನು ಕರ್ನಾಟಕ ಗಾಂಧಿ ನಿಧಿ, ಸ್ಮಾರಕ ನಿಧಿ ಉಪಾಧ್ಯಕ್ಷರಾದ ಎ. ಎನ್. ತಿಪ್ಪನಗೌಡ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್ ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಧರ್ಮದರ್ಶಿ ಪಿ. ಪರಮಶಿವಯ್ಯ ಹಾಗೂ ಪ್ರಾಂಶುಪಾಲರಾದ ಪ್ರೊ. ಆರ್. ಮಹಾಲಕ್ಷ್ಮಿ ಇದ್ದಾರೆ.

ಕನ್ನಡಪ್ರಭ
ಮಂಗಳವಾರ 6.8.2019



## ಜಲಸಂರಕ್ಷಣೆಗಾಗಿ ಮೈಸೂರಿಗೆ ವಿದ್ಯಾರ್ಥಿಗಳ ಸೈಕಲ್ ಜಾಥಾ

ಬೆಂಗಳೂರು: ನೀರಿನ ಸಂರಕ್ಷಣೆ ಕುರಿತು ಜಾಗೃತಿ ಮೂಡಿಸಲು ನಗರದ ಶೇಷಾದ್ರಿಪುರಂ ಕಾಲೇಜು ಹಾಗೂ ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯದ ಎನ್‌ಎಸ್‌ಎಸ್ ಘಟಕದ ವಿದ್ಯಾರ್ಥಿಗಳು ಬೆಂಗಳೂರಿನಿಂದ ಮೈಸೂರಿಗೆ 'ಜಲಶಕ್ತಿಗಾಗಿ ಜನಶಕ್ತಿ' ಸೈಕಲ್ ಜಾಥಾವನ್ನು ಸೋಮವಾರದಿಂದ ಆರಂಭಿಸಿದ್ದರು.

ರಾಷ್ಟ್ರೀಯ ಸೇವಾ ಯೋಜನೆಯ ಸುವರ್ಣ ಮಹೋತ್ಸವ ಹಾಗೂ ಬಾ-ಬಾಪು 150ನೇ ಜನ್ಮ ವರ್ಷಾಚರಣೆ ಅಂಗವಾಗಿ ಸೋಮವಾರ ಎನ್‌ಎಸ್‌ಎಸ್ ವಿದ್ಯಾರ್ಥಿಗಳಿಂದ ಈ ಸೈಕಲ್ ಜಾಥಾ ಆಯೋಜಿಸಲಾಗಿತ್ತು. ನಗರದ ಶೇಷಾದ್ರಿಪುರಂ ಕಾಲೇಜಿನ ಆವರಣದಲ್ಲಿ ಸೈಕಲ್ ಜಾಥಾಗೆ ಬೆಂಗಳೂರು ನಗರದ ಜಿಲ್ಲಾಧಿಕಾರಿ ಕೆ.ಶ್ರೀನಿವಾಸ್ ಚಾಲನೆ ನೀಡಿದರು. ಸೈಕಲ್ ಜಾಥಾದಲ್ಲಿ ಭಾಗವಹಿಸಿರುವ 200 ವಿದ್ಯಾರ್ಥಿಗಳು ಮಾರ್ಗದುದ್ದಕ್ಕೂ ಸಾರ್ವಜನಿಕರಿಗೆ ನೀರಿನ ಸಂರಕ್ಷಣೆ, ಮಿತ ಬಳಕೆ, ಮಳೆ ನೀರು ಕೊಯ್ಲು ಅಳವಡಿಕೆಗೆ ಸಂಬಂಧಿಸಿದಂತೆ ಜಾಗೃತಿ ಮೂಡಿಸಲಿದ್ದಾರೆ. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಎನ್‌ಎಸ್‌ಎಸ್ ರಾಜ್ಯ ಸಂಪರ್ಕಾಧಿಕಾರಿ ಡಾ. ಗಣನಾಥ ಶೆಟ್ಟಿ ಎಕ್ಕಾರು ಇತರರಿದ್ದರು.

ಸಂಯುಕ್ತ ಕರ್ನಾಟಕ

ಮಂಗಳವಾರ, 6, ಆಗಸ್ಟ್, 2019



ಶೇಷಾದ್ರಿಪುರ ಶಿಕ್ಷಣ ದತ್ತಿ ಹಾಗೂ ಬೆಂಗಳೂರು ಕೇಂದ್ರ ವಿವಿ ಸಹಯೋಗದಲ್ಲಿ ಆಯೋಜಿಸಲಾಗಿದ್ದ ನೀರಿನ ಮಹತ್ವ ಕುರಿತು ಜಾಗೃತಿ ಮೂಡಿಸುವ ಸೈಕಲ್ ಜಾಥಾಕ್ಕೆ ಬೆಂಗಳೂರು ನಗರ ಜಿಲ್ಲಾಧಿಕಾರಿ ಕೆ. ಶ್ರೀನಿವಾಸ್ ಅವರು ಹಸಿರು ನಿಶಾನೆ ತೋರಿದರು. ಈ ಸಂದರ್ಭದಲ್ಲಿ ಡಾ. ವೂಡೇ ಪಿ. ಕೃಷ್ಣ, ಗಣನಾಥ ಶೆಟ್ಟಿ ಎಕ್ಕಾರು, ಡಾ. ಗೋವಿಂದೇಗೌಡ ಮತ್ತಿತರರಿದ್ದರು.

ಸುವರ್ಣ ಟೈಮ್ಸ್ ಆಫ್ ಕರ್ನಾಟಕ

ಮಂಗಳವಾರ, 6 ಆಗಸ್ಟ್ 2019




## ಚಾಲನೆ...

ಬೆಂಗಳೂರು: ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಎನ್.ಎಸ್.ಎಸ್. ವಿದ್ಯಾರ್ಥಿಗಳಿಂದ ನಡೆದ ಬೆಂಗಳೂರಿನಿಂದ ಮೈಸೂರಿನವರೆಗೆ 'ಜಲ ಶಕ್ತಿಗಾಗಿ ಜನ ಶಕ್ತಿ' ಸೈಕಲ್ ಜಾಥಾಗೆ ಬೆಂ.ನಗರ ಜಿಲ್ಲಾಧಿಕಾರಿ ಶ್ರೀನಿವಾಸ್.ಕೆ. ಅವರು ಚಾಲನೆ ನೀಡಿದರು. ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ, ಎನ್.ಪಂಡಿತಾರಾಧ್ಯ, ಎಂ.ಎಸ್.ನಟರಾಜ್ ಮತ್ತಿತರರು ಇದ್ದರು.

ಹೊಸ ದಿಗಂತ

ಮಂಗಳವಾರ
6 ಆಗಸ್ಟ್ 2019

## ಬೆಂಗಳೂರಿನಿಂದ ಮೈಸೂರಿನವರೆಗೆ ಸೈಕಲ್ ಜಾಥಾಗೆ ಚಾಲನೆ

# ನೀರು ಸಂರಕ್ಷಣೆಗೆ ಜನಜಾಗೃತಿ

**ಬೆಂಗಳೂರು:** ನೀರಿನ ಸಂರಕ್ಷಣೆ ಹಾಗೂ ನೀರಿನ ಅಗತ್ಯೆಗಳ ಬಗ್ಗೆ ಜಾಗೃತಿ ಮೂಡಿಸುವುದು ಹಾಗೂ ಹನಿ ನೀರು ಶೇಖರಣೆ ನಮ್ಮ ಉದ್ದೇಶವಾಗಿದೆ ಎಂದು ಬೆಂಗಳೂರು ನಗರ ಜಿಲ್ಲಾಧಿಕಾರಿ ಕೆ.ಶ್ರೀನಿವಾಸ್ ತಿಳಿಸಿದರು.

ರಾಷ್ಟ್ರೀಯ ಸೇವಾ ಯೋಜನೆ ಸುವರ್ಣ ಮಹೋತ್ಸವ ಹಾಗೂ ಬಾ-ಬಾಪು-150 ಜನ್ಮ ವರ್ಷಾಚರಣೆಯ ಪ್ರಯುಕ್ತ ಬೆಂಗಳೂರು ಕೇಂದ್ರ ವಿವಿ ಸಹಯೋಗದೊಂದಿಗೆ ಶೇಷಾದ್ರಿಪುರ ಕಾಲೇಜಿನಲ್ಲಿ ಆಯೋಜಿಸಿದ್ದ ಜನಶಕ್ತಿಗಾಗಿ ಜಲಶಕ್ತಿ ಎಂಬ ಬೆಂಗಳೂರಿನಿಂದ ಮೈಸೂರಿನವರೆಗೆ ಸೈಕಲ್ ಜಾಥಾ ಉದ್ಘಾಟಿಸಿ ಮಾತನಾಡಿದ ಅವರು ಇಂದೊಂದು ಕೇಂದ್ರ ಸರ್ಕಾರದ ಯೋಜನೆಯಾಗಿದೆ. ಈ ಯೋಜನೆಯಡಿ ಬೆಂಗಳೂರು ನಗರವನ್ನು ಆಯ್ಕೆ ಮಾಡಲಾಗಿದೆ. ಕಾಲೇಜಿನ ಎನ್ ಎಸ್ ಘಟಕ ಸಮರ್ಪಕವಾಗಿ ಕೆಲಸ ನಿರ್ವಹಿಸುತ್ತಿದೆ ಎಂದರು.

ನಂತರ ಮಾತನಾಡಿದ ಕರ್ನಾಟಕ ಗಾಂಧೀ ಸ್ಮಾರಕ ಅಧ್ಯಕ್ಷ ಡಾ.ವೂಡೇ.ಪಿ.ಕೃಷ್ಣ, ಜಲ ಸಂಪನ್ಮೂಲವನ್ನು ಮುಂದಿನ ಜನಾಂಗಕ್ಕಾಗಿ ಉಳಿಸ ಬೇಕು. ಸೈಕಲ್ ಜಾಥಾವು ಸಾಮಾಜಿಕ ಸಂದೇಶವನ್ನು ಹೊತ್ತುಕೊಂಡು ಜನರಲ್ಲಿ ನೀರಿನ ಸಂರಕ್ಷಣೆ ಬಗ್ಗೆ ಅರಿವು ಮೂಡಿಸಲಿದೆ ಎಂದರು.

ಎನ್ಎಸ್ಎಸ್ ರಾಜ್ಯ ಸಂಪರ್ಕಾಧಿಕಾರಿ ಗಣನಾಥ ಶೆಟ್ಟಿ ಎಕ್ಕಾರು, ಬೆಂಗಳೂರು ಕೇಂದ್ರ ವಿವಿ ಎನ್ಎಸ್ಎಸ್ ಸಂಯೋಜನಾಧಿಕಾರಿ ಡಾ.ಗೋವಿಂದೇಗೌಡ, ಆಡಳಿತ ಸಲಹಾ ಮಂಡಳಿ ಅಧ್ಯಕ್ಷ ಎಂ.ಎಸ್.ನಟರಾಜ್, ಪ್ರಾಂಶುಪಾಲರಾದ ಅನುರಾಧ ರಾಯ್, ಪ್ರೊ.ಪ್ರತಾಪ್ ಲಿಂಗಯ್ಯ ಉಪಸ್ಥಿತರಿದ್ದರು.



ನಂ. 1 ಕನ್ನಡ ದಿನಪತ್ರಿಕೆ

VIJAYAVANI BENGALURU
ಮಂಗಳವಾರ 6 ಆಗಸ್ಟ್ 2019
6 AUGUST 2019





ಉದ್ಘಾಟನೆ: ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ರಾಮಕೃಷ್ಣ ಹೆಗಡೆ ರಾಷ್ಟ್ರೀಯ ಚಿಂತನಾ ವೇದಿಕೆ, ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನ ಗಾಂಧಿ ಅಧ್ಯಯನ ಕೇಂದ್ರ, ವಲ್ಲಭ ನಿಕೇತನ ಆಯೋಜನೆ. ಮಹಾದೇವಿ ತಾಯಿ ಅವರ 14ನೇ ಸಂಸ್ಮರಣೆ. ಕಿರು ಸಭಾಂಗಣ ಉದ್ಘಾಟನೆ ಹಾಗೂ ವಿಶೇಷ ಉಪನ್ಯಾಸ: ವಿಧಾನಸಭೆಯ ಮಾಜಿ ಸ್ಪೀಕರ್ ಕೆ.ಆರ್. ರಮೇಶ್‌ಕುಮಾರ್. ವಿಷಯ: ಪ್ರಜಾಪ್ರಭುತ್ವದಲ್ಲಿ ಸಮಕಾಲೀನ ಮೌಲ್ಯಗಳು.



ಸಾನ್ನಿಧ್ಯ: ವಿಜಯನಗರದ ಪತಂಜಲಿ ಯೋಗಾಶ್ರಮದ ಅಧ್ಯಕ್ಷ ಪ್ರಕಾಶ್ ಯೋಗಿ ಗುರೂಜಿ. ಅಧ್ಯಕ್ಷತೆ: ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಪ್ರಾಸ್ತಾವಿಕ ನುಡಿ: ಚಿಂತನಾ ವೇದಿಕೆ ಅಧ್ಯಕ್ಷ ಕೆ.ಎಸ್. ಸತ್ಯನಾರಾಯಣ. ಮುಖ್ಯ ಅತಿಥಿಗಳು: ವಿಧಾನಪರಿಷತ್‌ನ ಮಾಜಿ ಸದಸ್ಯರಾದ ಎಂ.ಪಿ. ನಾಡಗೌಡ, ಮೈಕಲ್ ಫರ್ನಾಂಡೀಸ್, ವಿಶ್ವನೀಡಂ ಟ್ರಸ್ಟ್‌ನ ಅಧ್ಯಕ್ಷೆ ಸವಿತಾ ಭಟ್, ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ.ನೋಟಕಾರ್ ಸತೀಶ್. ಸ್ಥಳ: **ಗಾಂಧಿ ಭವನ, ಶಿವಾನಂದ ವೃತ್ತ ಬಳಿ. ಸಾಯಂಕಾಲ 4.30ಕ್ಕೆ.**

ಸಂಜೆವಾಣಿ

ಸೋಮವಾರ, 5 ಆಗಸ್ಟ್ 2019



ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಇಂದು ನಡೆದ ಎನ್.ಎಸ್.ಎಸ್ ವಿದ್ಯಾರ್ಥಿಗಳಿಂದ ಬೆಂಗಳೂರಿನಿಂದ ಮೈಸೂರಿನವರೆಗೆ ಜಲಶಕ್ತಿಗಾಗಿ ಜನಶಕ್ತಿ ಸೈಕಲ್ ಜಾಥಾಗೆ ಬೆಂ.ನಗರ ಜಿಲ್ಲಾಧಿಕಾರಿ ಶ್ರೀನಿವಾಸ್.ಕೆ.ಅವರು ಚಾಲನೆ ನೀಡಿದರು. ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ, ಎನ್.ಪಂಡಿತಾರಾಧ್ಯ, ಎಂ.ಎಸ್.ನಟರಾಜ್ ಮತ್ತಿತರರು ಇದ್ದಾರೆ.

ಈ ಸಂಜೆ
ಸೋಮವಾರ, 05-08-2019

**ಹನಿ ಹನಿ ನೀರು ಉಳಿಸಿ ಜಲ ಕ್ಷಾಮ ಅಳಿಸಿ**



ಶೇಷಾದ್ರಿಪುರಂ ಕಾಲೇಜು ಹಾಗೂ ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯದ ಎನ್‌ಎಸ್‌ಎಸ್ ಘಟಕದ ಸಂಯುಕ್ತಾಶ್ರಯದಲ್ಲಿ ಬೆಂಗಳೂರಿನಿಂದ ಮೈಸೂರಿನವರೆಗೆ ಹಮ್ಮಿಕೊಂಡಿದ್ದ ಜಲಶಕ್ತಿಗಾಗಿ ಜನಶಕ್ತಿ ಸೈಕಲ್ ಜಾಥಾಗೆ ನಗರ ಜಿಲ್ಲಾಧಿಕಾರಿ ಶ್ರೀನಿವಾಸ್ ಚಾಲನೆ ನೀಡಿದರು. ಗಾಂಧಿಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ. ಪಿ. ಕೃಷ್ಣ, ಎನ್‌ಎಸ್‌ಎಸ್ ರಾಜ್ಯಸಂಪರ್ಕಾಧಿಕಾರಿ ಡಾ. ಗಣನಾಥ ಶೆಟ್ಟಿ ಎಕ್ಕಾರು, ಬೆಂಗಳೂರು ಕೇಂದ್ರ ವಿವಿಯ ಎನ್‌ಎಸ್‌ಎಸ್ ಘಟಕದ ಸಂಯೋಜನಾಧಿಕಾರಿ ಡಾ. ಗೋವಿಂದೇಗೌಡ ಮತ್ತಿತರರು ಇದ್ದರು.

ಸಂಯುಕ್ತ ಕರ್ನಾಟಕ
ಸೋಮವಾರ, 5, ಅಗಸ್ಟ್, 2019

# ಸ್ವಚ್ಛತೆಗಿರಲಿ ಪೌರರ ಸಹಕಾರ

## ಸಿಟಿಜನ್ಸ್ ಗವರ್ನೆನ್ಸ್-ಜನಶಾಸನ ಕಾರ್ಯಾಗಾರಕ್ಕೆ ಚಾಲನೆ

ಸಂ.ಕ. ಸಮಾಚಾರ ಬೆಂಗಳೂರು

ರಾಜಧಾನಿ ಬೆಂಗಳೂರು ಸುಂದರ ಹಾಗೂ ಸ್ವಚ್ಛ ನಗರಿಯಾಗಬೇಕಾದಲ್ಲಿ ನಾಗರಿಕರ ಸಹಕಾರ ಮುಖ್ಯ ಎಂದು ಬಿಬಿಎಂಪಿ ಆಯುಕ್ತ ಮಂಜುನಾಥ ಪ್ರಸಾದ್ ಅಭಿಪ್ರಾಯಪಟ್ಟರು.

ವಂದೇ ಮಾತರಂ ಸಂಸ್ಥೆ ಹಾಗೂ ಬಿಬಿಎಂಪಿ ಸಹಯೋಗದಲ್ಲಿ ಹಮ್ಮಿಕೊಳ್ಳಲಾಗಿದ್ದ ಸಿಟಿಜನ್ಸ್ ಗವರ್ನೆನ್ಸ್ – ಜನಶಾಸನ ಕಾರ್ಯಾಗಾರಕ್ಕೆ ಚಾಲನೆ ನೀಡಿ ಮಾತನಾಡಿದ ಅವರು, ನಾವು ತೆರಿಗೆ ಪಾವತಿ ಮಾಡುತ್ತೇವೆ. ಉಳಿದ ಕೆಲಸವನ್ನು ಬಿಬಿಎಂಪಿ ಮಾಡಲಿ ಎಂಬ ಮನೋಭಾವ ಬಹುತೇಕರಲ್ಲಿದೆ. ಆ ಧೋರಣೆ ಬದಲಾಗಿ ಇಬ್ಬರೂ. ಒಂದು ಕುಟುಂಬದ ರೀತಿಯಲ್ಲಿ ಪರಿಗಣಿಸಿ ನಗರವನ್ನು ಸುಂದರವಾಗಿಸಲು ಮುಂದಾಗಬೇಕು. ಇಲ್ಲದಿದ್ದರೆ ನಗರ ಅಭಿವೃದ್ಧಿಯಾಗಲು ಸಾಧ್ಯವಿಲ್ಲ. ಪಾಲಿಕೆಗೆ ಪ್ರತಿ ವರ್ಷ 2 ಸಾವಿರ ಕೋಟಿ ರೂ.ಗಳಷ್ಟು ತೆರಿಗೆ ಸಂಗ್ರಹವಾಗುತ್ತಿದೆ. ಆದರೆ, ಪಾಲಿಕೆ ಪ್ರತಿ ವರ್ಷ ಅಭಿವೃದ್ಧಿ ಕಾರ್ಯಗಳಿಗೆ 10 ಸಾವಿರ ಕೋಟಿ ರೂ. ವ್ಯಯಿಸುತ್ತಿದೆ. ಪಾಲಿಕೆ ಕೈಗೆತ್ತಿಕೊಳ್ಳುವ ಎಲ್ಲಾ ಯೋಜನೆಗಳಿಗೂ ಸಾರ್ವಜನಿಕರು ಕೈ ಜೋಡಿಸಿ ನಗರವನ್ನು ಅಭಿವೃದ್ಧಿಪಡಿಸಲು ಶ್ರಮಿಸಬೇಕು ಎಂದರು.

ಎಲ್ಲರಲ್ಲೂ ನಮ್ಮ ನಗರ, ನಮ್ಮ ಕಸ –ನಮ್ಮ ಜವಾಬ್ದಾರಿ ಎಂಬ ಅರಿವು ಮೂಡಿದಾಗ ಮಾತ್ರ ಸಮಸ್ಯೆ ಬಗೆಹರಿಯಲು ಸಾಧ್ಯ. ಅಲ್ಲದೆ ನಗರವನ್ನು ಸ್ವಚ್ಛವಾಗಿಡಲು ಸಾಧ್ಯ. ನಗರದ ಶೇಕಡ 50ರಷ್ಟು ನಾಗರಿಕರು ಸ್ವಯಂ ಪ್ರೇರಿತವಾಗಿ ಮುಂದೆ ಬಂದು ಸಸಿಗಳನ್ನು ನೆಟ್ಟು ಪೋಷಣೆ ಮಾಡಿದೆ ವರ್ಷದಲ್ಲಿ 50 ಲಕ್ಷ ಸಸಿ ನೆಡಬಹುದು ಎಂದು ಹೇಳಿದರು.



ವಂದೇ ಮಾತರಂ ಸಂಸ್ಥೆ ಹಾಗೂ ಬಿಬಿಎಂಪಿ ಸಹಯೋಗದಲ್ಲಿ ಹಮ್ಮಿಕೊಳ್ಳಲಾಗಿದ್ದ ಸಿಟಿಜನ್ಸ್ ಗವರ್ನೆನ್ಸ್ – ಜನಶಾಸನ ಕಾರ್ಯಾಗಾರವನ್ನು ಮೇಯರ್ ಗಂಗಾಂಬಿಕೆ, ಆಯುಕ್ತ ಮಂಜುನಾಥ ಪ್ರಸಾದ್ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪರಿಸರ ತಜ್ಞ ಯಲ್ಲಪ್ಪ ರೆಡ್ಡಿ, ಭೂ ವಿಜ್ಞಾನ ತಜ್ಞ ಡಾ. ಸಾವರ್ಕರ್ ಗಾಂಧಿ ಸ್ಮಾರಕ ಸಂಸ್ಥೆಯ ಡಾ. ವೂಡೆ ಪಿ. ಕೃಷ್ಣ, ಬಿಡಿಎ ಆಯುಕ್ತೆ ಮಂಜುಳಾ ಮತ್ತಿತರರಿದ್ದರು.

ಮೇಯರ್ ಗಂಗಾಂಬಿಕೆ ಮಾತನಾಡಿ, ಬೆಂಗಳೂರು ಮಹಾನಗರವನ್ನು ಸುಂದರ ನಗರಿಯನ್ನಾಗಿಸಬೇಕಾದರೆ ಜನಪ್ರತಿನಿಧಿಗಳು, ಅಧಿಕಾರಿಗಳು, ನಾಗರಿಕರು ಕೈ ಜೋಡಿಸಿ ಕೆಲಸ ಮಾಡಬೇಕು. ತಮ್ಮ ವಾರ್ಡ್ ಸಮಸ್ಯೆ ಕಂಡು ಬಂದರೆ ಜನಪ್ರತಿನಿಧಿಗಳಿಗೆ ನಾಗರಿಕರು ದೂರವಾಣಿ ಮೂಲಕ ಕರೆ ಮಾಡಿ ಸಮಸ್ಯೆ ತಿಳಿಸಿದರೆ ಕೂಡಲೆ ಸಮಸ್ಯೆ ಬಗೆಹರಿಸಲಾಗುವುದು.

ಒಂದು ವೇಳೆ ಕರೆ ಸ್ವೀಕರಿಸದ ಪಕ್ಷದಲ್ಲಿ ಸಂದೇಶದ ಮೂಲಕ ಮಾಹಿತಿ ತಿಳಿಸಿ. ಇಲ್ಲವಾದರೆ ಅಧಿಕಾರಿಗಳಿಗೆ ಕರೆ ಮಾಡಿ ನಿಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಿ ಅಥವಾ ವಾರ್ಡ್ ಕಚೇರಿಗಳಲ್ಲಿ ಸಮಸ್ಯೆ ದಾಖಲಿಸುವ ಪುಸ್ತಕದಲ್ಲಿ ದೂರು ದಾಖಲು ಮಾಡಿದರೆ ನಿಗದಿತ ಸಮಯದಲ್ಲಿ ನಿವಾರಣೆ ಮಾಡಲು ಕ್ರಮ ವಹಿಸಲಾಗುವುದು ಎಂದು ತಿಳಿಸಿದರು

ಕಾರ್ಯಗಾರದಲ್ಲಿ ಪರಿಸರ ತಜ್ಞ ಯಲ್ಲಪ್ಪ ರೆಡ್ಡಿ, ಭೂ ವಿಜ್ಞಾನ ತಜ್ಞ ಡಾ. ಸಾವರ್ಕರ್, ಗಾಂಧಿ ಸ್ಮಾರಕ ಸಂಸ್ಥೆಯ ಡಾ. ವೂಡೆ ಪಿ. ಕೃಷ್ಣ, ಬಿಡಿಎ ಆಯುಕ್ತೆ ಮಂಜುಳಾ, ಬಿಬಿಎಂಪಿ ಅಧಿಕಾರಿಗಳು, ವಿವಿಧ ಇಲಾಖೆಗಳ ಹಿರಿಯ ಅಧಿಕಾರಿಗಳು ಭಾಗವಹಿಸಿದ್ದರು.

ವಿಜಯವಾಣಿ
ಶನಿವಾರ 27 ಜುಲೈ 2019

# ಗಾಂಧಿ, ವಿವೇಕಾನಂದರ ಆದರ್ಶ ಪಾಲಿಸಲು ಕರೆ



ಶೇಷಾದ್ರಿಪುರಂ ಸಂಯುಕ್ತ ಪ.ಪೂ. ಕಾಲೇಜಿನ ವಿವೇಕಾನಂದ ಅಧ್ಯಯನ ಕೇಂದ್ರದ ಶೈಕ್ಷಣಿಕ ಚಟುವಟಿಕೆಗಳನ್ನು ಡಾ. ವೂಡೇ ಪಿ. ಕೃಷ್ಣ ಉದ್ಘಾಟಿಸಿದರು. ಕಾಲೇಜಿನ ಸಿಬ್ಬಂದಿ ಉಪಸ್ಥಿತರಿದ್ದರು.

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ರಾಷ್ಟ್ರಪಿತ ಮಹಾತ್ಮ ಗಾಂಧಿ ಹಾಗೂ ಸ್ವಾಮಿ ವಿವೇಕಾನಂದರು ಯುವಕರಿಗೆ ಆದರ್ಶವಾಗಬೇಕು ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಹೇಳಿದ್ದಾರೆ.

» ವಿವೇಕಾನಂದ ಅಧ್ಯಯನ ಕೇಂದ್ರದ ಚಟುವಟಿಕೆ ಆರಂಭ

» ಹಲವು ಸ್ಪರ್ಧೆಗಳ ಆಯೋಜನೆ

ಶೇಷಾದ್ರಿಪುರಂ ಸಂಯುಕ್ತ ಪದವಿಪೂರ್ವ ಕಾಲೇಜಿನ ವಿವೇಕಾನಂದ ಅಧ್ಯಯನ ಕೇಂದ್ರದ ಶೈಕ್ಷಣಿಕ ಚಟುವಟಿಕೆಗಳನ್ನು ಉದ್ಘಾಟಿಸಿ ಮಾತನಾಡಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಎಲ್ಲ ಕಾಲೇಜುಗಳಲ್ಲಿ 17 ವಿವೇಕಾನಂದ ಅಧ್ಯಯನ ಕೇಂದ್ರಗಳನ್ನು ಆರಂಭಿಸಲಾಗಿದೆ. ವಿದ್ಯಾರ್ಥಿಗಳಿಗೆ ವಿವೇಕಾನಂದರ ಆದರ್ಶಗಳನ್ನು ಅಳವಡಿಕೊಳ್ಳಲು ಕೇಂದ್ರ ಸಹಕಾರಿಯಾಗಲಿದೆ ಎಂದರು. ಕೇಂದ್ರದ ವತಿಯಿಂದ ವಿದ್ಯಾರ್ಥಿಗಳಿಗೆ ವಿವೇಕಾನಂದರ ಬಗ್ಗೆ ವಿವಿಧ ಸ್ಪರ್ಧೆಗಳು, ಚರ್ಚೆ, ಭಾಷಣ ಸೇರಿ ಇತರೆ ಕಾರ್ಯಕ್ರಮ ನಡೆಸಲಾಗುವುದು. ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳು ಕೇಂದ್ರದಲ್ಲಿ ಹೆಸರು ನೋಂದಾಯಿಸಿಕೊಂಡು ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ ಎಂದು ಮಾಹಿತಿ ನೀಡಿದರು.

ವಿಶ್ವದ ಇತರ ರಾಷ್ಟ್ರಗಳು ಭಾರತದ ಕಡೆ ವಿಸ್ಮಯದಿಂದ ನೋಡುವಂತೆ ಮಾಡಿದವರು ಸ್ವಾಮಿ ವಿವೇಕಾನಂದ. ಹಿಂದು ಧರ್ಮವನ್ನು ಪ್ರಪಂಚ ತಿಳಿಯುವಂತೆ ಮಾಡಿಧರು ಎಂದು ಕನ್ನಡ ಉಪನ್ಯಾಸಕ ಗಂ. ದಯಾನಂದ ಹೇಳಿದರು.

ಶೇಷಾದ್ರಿಪುರಂ ಸಂಯುಕ್ತ ಪದವಿಪೂರ್ವ ಕಾಲೇಜು ಪ್ರಾಂಶುಪಾಲ ಬಿ.ಕೆ. ಮಂಜುನಾಥ್, ಶೇಷಾದ್ರಿಪುರಂ ವಾಣಿಜ್ಯ ಮತ್ತು ನಿರ್ವಹಣೆ ಸಂಸ್ಥೆ ಪ್ರಾಂಶುಪಾಲ ಪ್ರೊ. ವಿದ್ಯಾ ಶಿವಣ್ಣವರ್, ಯಲಹಂಕ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು ಪ್ರಾಂಶುಪಾಲ ಪ್ರೊ. ಟಿ. ದೊಡ್ಡೇಗೌಡ, ಪ್ರೊ. ಆರ್.ವಿ. ಮಂಜುನಾಥ್ ಮತ್ತಿತರರಿದ್ದರು.

26-07-2019



ಶೇಷಾದ್ರಿಪುರಂ ಕಾಲೇಜಿನಲ್ಲಿಂದು ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ವಿವೇಕಾನಂದ ಸ್ಟಡಿ ಸೆಂಟರ್ ಅನ್ನು ಕಾಲೇಜಿನ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಉದ್ಘಾಟಿಸಿದರು. ಉಪನ್ಯಾಸಕ ದಯಾನಂದ್, ಪ್ರಾಂಶುಪಾಲ ಜಿ.ಕೆ.ಮಂಜುನಾಥ್, ಟಿ.ದೊಡ್ಡೇಗೌಡ ಮತ್ತಿತರರಿದ್ದರು.

ಸಂಯುಕ್ತ ಕರ್ನಾಟಕ

# ಪ್ರತಿಭಾ ಪಲಾಯನ ತಡೆಗೆ ಚಿಂತನೆ ಅಗತ್ಯ

## ಬಾಪೂ, ವಿನೋಬಾ ಸಂದೇಶ ತಲುಪಿಸಲು ಅಭಿಯಾನ



ಹಾವೇರಿಯ ಹುಕ್ಕೇರಿಮಠದಲ್ಲಿ ನಡೆದ ರಾಷ್ಟ್ರಪಿತ ಗಾಂಧೀಜಿ, ಕಸ್ತೂರಬಾ ಹಾಗೂ ವಿನೋಬಾ ಅವರ ಸಂದೇಶಗಳನ್ನು ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ತಲುಪಿಸುವ ಅಭಿಯಾನ ಕಾರ್ಯಕ್ರಮಕ್ಕೆ ಶ್ರೀಗಳು ಉದ್ಘಾಟಿಸಿದರು.

**ಕೈ ಚಾಚಿಲ್ಲ...**

ಈಗ ಬದಲಾವಣೆಗೆ ಕಾಲ ಕೂಡಿ ಬಂದಿದೆ. ದೇಶ ಹೇಗೆ ಇಟ್ಟುಕೊಳ್ಳಬೇಕು ಎಂಬ ಅರಿವು ನಿಮ್ಮ ಮೇಲಿದೆ. ಗಾಂಧೀಜಿಯವರ ಕನಸಿನ ಭಾರತದ ನಿರ್ಮಾಣ ನಿಮ್ಮಿಂದ ಸಾಕಾರಗೊಳ್ಳಲಿ. ಇಂದಿನ ದಿನಗಳಲ್ಲಿ ಮನೆ, ಮಕ್ಕಳಿಗಾಗಿ ದೇಶವನ್ನೇ ಹರಾಜಿಗೆ ಇಡುವವರೇ ಹೆಚ್ಚಾಗಿದ್ದಾರೆ. ದೇಶದಲ್ಲಿ ಎಲ್ಲಿ ಹೋದರು ಭ್ರಷ್ಟಾಚಾರ ಹಾಸುಹೊಕ್ಕಿದೆ. ಇದು ಮಠಾಧೀಶರನ್ನು ಕೈ ಬಿಟ್ಟಿಲ್ಲ.

— ದಿಂಗಾಲೇಶ್ವರ ಶ್ರೀಗಳು

ಸಂ.ಕ ಸಮಾಚಾರ, ಹಾವೇರಿ

ಇಂದಿನ ದಿನಗಳಲ್ಲಿ ದೇಶದಲ್ಲಿ ಚೆನ್ನಾಗಿ ವಿದ್ಯಾಭ್ಯಾಸ ಮಾಡಿ ವಿದೇಶದಲ್ಲಿ ಸೇವೆ ಸಲ್ಲಿಸುವವರ ಸಂಖ್ಯೆಯೇ ಹೆಚ್ಚಾಗಿದೆ. ಆದರೆ ಗಾಂಧೀಜಿಯವರು ವಿದೇಶದಲ್ಲಿ ಚೆನ್ನಾಗಿ ಕಲಿತು ದೇಶಕ್ಕಾಗಿ ಸೇವೆ ಸಲ್ಲಿಸಿದ್ದಾರೆ. ಇದು ನಮಗೂ ಹಾಗೂ ಗಾಂಧೀಜಿಯವರಿಗೆ ಇರುವ ವ್ಯತ್ಯಾಸ ಎಂದು ಎಂದು ಬಾಲೇಹೊಸೂರ ದಿಂಗಾಲೇಶ್ವರ ಮಠದ ದಿಂಗಾಲೇಶ್ವರ ಸ್ವಾಮೀಜಿ ಹೇಳಿದರು.

ನಗರದ ಹುಕ್ಕೇರಿಮಠದ ಶಿವಾನುಭವ ಮಂಟಪದಲ್ಲಿ ಮಹಾತ್ಮ ಗಾಂಧೀಜಿ 150ನೇ ಜಯಂತಿ ವರ್ಷಾಚರಣೆ ನಿಮಿತ್ತ ಸೋಮವಾರ ನಡೆದ ರಾಷ್ಟ್ರಪಿತ ಗಾಂಧೀಜಿ, ಕಸ್ತೂರಬಾ ಹಾಗೂ ವಿನೋಬಾ ಅವರ ಸಂದೇಶಗಳನ್ನು ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ತಲುಪಿಸುವ ಅಭಿಯಾನ ಕಾರ್ಯಕ್ರಮದ ಸಾನ್ನಿಧ್ಯ ವಹಿಸಿ ಮಾತನಾಡಿದ ಅವರು, ವಿದೇಶದಲ್ಲಿ ಹೆಚ್ಚು ಹಣ ಸಿಗುತ್ತದೆ, ಆದರೆ ಬೆಲೆ ಸಿಗುವುದಿಲ್ಲ. ಹಣಕ್ಕೆ ಬೆಲೆ ಕೊಡುವವರಿಗೆ ಸಮಾಜದಲ್ಲಿ ಬೆಲೆ ಇರುವುದಿಲ್ಲ, ಆದರ್ಶಕ್ಕಾಗಿ ಬದುಕಿದವರಿಗೆ ಸಮಾಜವೇ ಬೆಲೆ ಕೊಡುತ್ತದೆ. ದೇಶಕ್ಕಾಗಿ ಹೋರಾಟ ನಡೆಸಿದ ಮಹಾತ್ಮ ಗಾಂಧೀಜಿಯವರ ಬದುಕು ನಮ್ಮೆಲ್ಲರಿಗೂ ಪ್ರೇರಣೆ. ಮಹಾತ್ಮ ಗಾಂಧೀಜಿಯವರ ಸ್ವಾಭಿಮಾನ, ದೇಶಾಭಿಮಾನದ ಬದುಕು ನಮಗೆ ಆದರ್ಶ. ಇಂತಹ ಮಹಾನ್ ನಾಯಕರ ತತ್ವಾದರ್ಶಗಳನ್ನು ಜೀವನದಲ್ಲಿ ರೂಢಿಸಿಕೊಂಡು ದೇಶ ಕಟ್ಟುವ ಕೆಲಸಕ್ಕೆ ಮುಂದಾಗಬೇಕು. ದೇಶ ಉದ್ಧಾರವಾಗಬೇಕಾದರೆ ಮೊದಲು ನಾವು ಬದಲಾಗಬೇಕು ಎಂದರು.

ಹುಕ್ಕೇರಿಮಠದ ಸದಾಶಿವ ಸ್ವಾಮೀಜಿ ಮಾತನಾಡಿ, ಮಹಾತ್ಮ ಗಾಂಧೀಜಿವರಿಗೂ ಹಾವೇರಿಗೂ ಅವಿನಾಭಾವ ಸಂಬಂಧವಿದೆ. ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಗಾಂಧೀಜಿಯವರೊಂದಿಗೆ ಜಿಲ್ಲೆಯ ಮೈಲಾರ ಮಹದೇವಪ್ಪನವರು ಪಾಲ್ಗೊಂಡಿದ್ದು ನಾವು ಹೆಮ್ಮೆಪಡುವ ವಿಷಯ. ಸ್ವಾತಂತ್ರ್ಯ ಹೋರಾಟಕ್ಕಾಗಿ ಜಿಲ್ಲೆಯವರಾದ ತಿರಕಪ್ಪ ಮಡಿವಾಳರ, ವೀರಯ್ಯ ಹಿರೇಮಠ ಬಲಿದಾನ ಸ್ಮರಣೀಯ. ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣ ತ್ಯಾಗ ಮಾಡಿದರ ಬಗ್ಗೆ ಇತಿಹಾಸ ಓದಿ ತಿಳಿದುಕೊಳ್ಳಬೇಕು. ಆದರೆ ಇಂದಿನ ಯುವ ಜನಾಂಗದಲ್ಲಿ ಆತ್ಮ ಕಾಳಜಿ ಜೊತೆಗೆ ದೇಶ ಕಾಳಜಿ ಕಡಿಮೆಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಗಾಂಧೀಜಿಯವರ ಆದರ್ಶ ವಿದ್ಯಾರ್ಥಿಗಳಿಗೆ ಮುಟ್ಟಿಸುವ ಸಲುವಾಗಿ ಈ ಕಾರ್ಯಕ್ರಮದ ಮೂಲಕ ಜಿಲ್ಲೆಯ 50 ಶಾಲಾ-ಕಾಲೇಜುಗಳಲ್ಲಿ ಉಪನ್ಯಾಸ ಕೊಡಿಸುವ ಸಂಕಲ್ಪ ಮಾಡಲಾಗಿದೆ ಎಂದರು.

ಕಾರ್ಯಕ್ರಮ ಉದ್ಘಾಟಿಸಿದ ಜಿಲ್ಲಾಧಿಕಾರಿ ಕೃಷ್ಣ ಭಾಜಪೇಯಿ ಮಾತನಾಡಿ, ಮಹಾತ್ಮ ಗಾಂಧೀಜಿಯವರ ವ್ಯಕ್ತಿತ್ವ ಚಿಂತನೆಗಳು ಮಾದರಿ. ವ್ಯಾಪಾರಿಗಳು ಲಾಭದ ಗುರಿ ಹೊಂದಿದ್ದರೆ, ಮಠಾಧೀಶರು ಸಮಾಜ ಪರಿವರ್ತಿಸುವ ಗುರಿ ಹೊಂದಿರುತ್ತಾರೆ. ಅದೇ ರೀತಿ ಗಾಂಧೀಜಿವರು ದೇಶಕ್ಕಾಗಿ ಸ್ವಾತಂತ್ರ್ಯ ತಂದುಕೊಡುವ ಗುರಿ ಹೊಂದಿದ್ದರು. ಈ ಗುರಿಯನ್ನು ಅವರು ಸತ್ಯ ಹಾಗೂ ಅಹಿಂಸೆ ಹೋರಾಟದ ಮೂಲಕ ಸಾಧಿಸಿದ್ದಾರೆ. ತಪ್ಪುದಾರಿಯಲ್ಲಿ ನಡೆದರೆ ಸಾಧನೆ ಹಾಗೂ ಗುರಿ ಮುಟ್ಟಲು ಸಾಧ್ಯವಿಲ್ಲ ಎಂಬುದನ್ನು ಪ್ರಪಂಚಕ್ಕೆ ತಿಳಿಸಿದ್ದಾರೆ ಎಂದರು.

ಸ್ವಾತಂತ್ರ್ಯ ಹೋರಾಟಗಾರ್ತಿ ಚನ್ನಮ್ಮ ಹಳ್ಳಿಕೇರಿ ಮಾತನಾಡಿ, ಗಾಂಧೀಜಿಯವರ 150ನೇ ಜಯಂತಿಯನ್ನು ವಿಶೇಷವಾಗಿ ಆಚರಿಸಲು ಸಂಕಲ್ಪ ಹೊಂದಲಾಗಿದ್ದು ರಾಜ್ಯಾದ್ಯಂತ 150 ಕಾರ್ಯಕ್ರಮ ಹಮ್ಮಿಕೊಂಡು ಗಾಂಧೀಜಿವರ ಆದರ್ಶಗಳನ್ನು ತಿಳಿಸುವ ಕಾರ್ಯ ಆಯೋಜಿಸಲಾಗಿದೆ. ಜಿಲ್ಲೆಯಲ್ಲಿ 50 ಕಾರ್ಯಕ್ರಮ ನಡೆಸಿಕೊಡುವಂತೆ ದಿಂಗಾಲೇಶ್ವರ ಸ್ವಾಮೀಜಿ ಹಾಗೂ ಸದಾಶಿವ ಸ್ವಾಮೀಜಿಗಳ ಬಳಿ ಕೇಳಿಕೊಂಡಾಗ ಸಕಾರಾತ್ಮಕವಾಗಿ ಸ್ಪಂದಿಸಿ ಕಾರ್ಯಕ್ರಮ ಆಯೋಜಿಸಿದ್ದಾರೆ. ವಿದ್ಯಾರ್ಥಿಗಳು ಈ ಕಾರ್ಯಕ್ರಮ ಸದುಪಯೋಗ ಪಡೆದು ಗಾಂಧೀಜಿವರ ವಿಚಾರಧಾರೆ ಹಂಚಿಕೊಳ್ಳಬೇಕು ಎಂದರು.

ಬೆಂಗಳೂರು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಉಡೇಪಿ ಕೃಷ್ಣ, ಮಾಜಿ ಸಂಸದ ಎಚ್. ಹನುಮಂತಪ್ಪ ಮಾತನಾಡಿದರು. ಇದೇ ಸಂದರ್ಭದಲ್ಲಿ 5 ಕಾಲೇಜುಗಳಿಗೆ ಸಾಂಕೇತಿಕವಾಗಿ ಗಾಂಧೀಜಿಯವರ ಕುರಿತ ಕಿರು ಪುಸ್ತಕ ವಿತರಿಸಲಾಯಿತು.

ಅಕ್ಕಿಆಲೂರು ವಿರಕ್ತಮಠದ ಶಿವಬಸವ ಸ್ವಾಮೀಜಿ, ಕೂಡಲ ಗುರುನಂಜೇಶ್ವರಮಠದ ಗುರುಮಹೇಶ್ವರ ಶಿವಾಚಾರ್ಯರು, ಸೇಡಂನ ತೋಂಟದಾರ್ಯ ಮಠದ ಸದಾಶಿವ ಸ್ವಾಮೀಜಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಉಪಾಧ್ಯಕ್ಷ ಶಿವನಗೌಡ್ರ, ಪದವಿಪೂರ್ವ ಶಿಕ್ಷಣ ಇಲಾಖೆ ಉಪನಿರ್ದೇಶಕ ಎಸ್.ಸಿ. ಪೀರಜಾದೆ ಉಪಸ್ಥಿತರಿದ್ದರು. ಸಾಹಿತಿ ಸತೀಶ ಕುಲಕರ್ಣಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಬಿ.ಬಸವರಾಜ ಸ್ವಾಗತಿಸಿದರು. ನಾಗರಾಜ ನಡುವಿನಮಠ ಕಾರ್ಯಕ್ರಮ ನಿರೂಪಿಸಿ, ವಂದಿಸಿದರು.

ಉದಯವಾಣಿ
ಜನಮನದ ಜೀವನಾಡಿ

ಮಹಾತ್ಮರ ಸಂದೇಶ ■ ಗಾಂಧೀಜಿ ಕನಸಿನ ಭಾರತ ನಿರ್ಮಾಣ ನಿಮ್ಮಿಂದ ಸಾಕಾರ

# ಆದರ್ಶಕ್ಕಾಗಿ ಬದುಕಿದವರಿಗೆ ಬೆಲೆ: ದಿಂಗಾಲೇಶ್ವರ ಶ್ರೀ

ಹಾವೇರಿ: ಹಣಕ್ಕೆ ಬೆಲೆ ಕೊಡುವವರಿಗೆ ಸಮಾಜದಲ್ಲಿ ಬೆಲೆ ಇರುವುದಿಲ್ಲ, ಆದರ್ಶಕ್ಕಾಗಿ ಬದುಕಿದವರಿಗೆ ಸಮಾಜವೇ ಬೆಲೆ ಕೊಡುತ್ತದೆ ಎಂದು ಬಾಲೇಹೊಸೂರಿನ ದಿಂಗಾಲೇಶ್ವರ ಸ್ವಾಮೀಜಿ ನುಡಿದರು.

ಮಹಾತ್ಮಾ ಗಾಂಧೀಜಿ 150ನೇ ಜಯಂತಿ ವರ್ಷಾಚರಣೆ ನಿಮಿತ್ತ ಸೋಮವಾರ ನಗರದ ಹುಕ್ಕೇರಿಮಠದ ಶಿವಾನುಭವ ಮಂಟಪದಲ್ಲಿ ಏರ್ಪಡಿಸಿದ್ದ ರಾಷ್ಟ್ರಪಿತ ಗಾಂಧೀಜಿ, ಕಸ್ತೂರಬಾ ಹಾಗೂ ವಿನೋಬಾ ಜಿ ಅವರ ಸಂದೇಶಗಳನ್ನು ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ತಲುಪಿಸುವ ಅಭಿಯಾನ ಕಾರ್ಯಕ್ರಮದ ಸಾನ್ನಿಧ್ಯ ವಹಿಸಿ ಅವರು ಆಶೀರ್ವಚನ ನೀಡಿದರು.

ವಿದೇಶದಲ್ಲಿ ಹೆಚ್ಚು ಹಣ ಸಿಗುತ್ತದೆ. ಆದರೆ, ಬೆಲೆ ಸಿಗುವುದಿಲ್ಲ. ದೇಶಕ್ಕಾಗಿ ಹೋರಾಟ ನಡೆಸಿದ ಮಹಾತ್ಮಾ ಗಾಂಧೀಜಿಯವರ ಬದುಕು ನಮ್ಮೆಲ್ಲರಿಗೂ ಪ್ರೇರಣೆಯಾಗಿದೆ. ದೇಶ ಉದ್ಧಾರವಾಗಬೇಕಾದರೆ ಮೊದಲು ನಾವು ಬದಲಾಗಬೇಕು. ಈಗ ಬದಲಾವಣೆಗೆ ಕಾಲ ಕೂಡಿ ಬಂದಿದೆ. ದೇಶವನ್ನು ಹೇಗೆ ಇಟ್ಟುಕೊಳ್ಳಬೇಕು ಎಂಬ ಅರಿವು ನಿಮ್ಮ ಮೇಲಿದೆ. ಗಾಂಧೀಜಿಯವರ ಕನಸಿನ ಭಾರತದ ನಿರ್ಮಾಣ ನಿಮ್ಮಿಂದ ಸಾಕಾರಗೊಳ್ಳಲಿ ಎಂದರು.

ಮಹಾತ್ಮಾ ಗಾಂಧೀಜಿಯವರ ಸ್ವಾಭಿಮಾನ, ದೇಶಾಭಿಮಾನದ ಬದುಕು ನಮ್ಮೆಲ್ಲರಿಗೂ ಆದರ್ಶವಾಗಿದ್ದು ಇಂತಹ ಮಹಾನ್ ನಾಯಕರ ತತ್ವಾದರ್ಶಗಳನ್ನು ಜೀವನದಲ್ಲಿ ರೂಢಿಸಿಕೊಂಡು ದೇಶ ಕಟ್ಟುವ ಕೆಲಸಕ್ಕೆ ಮುಂದಾಗಬೇಕು. ಇಂದಿನ ದಿನಗಳಲ್ಲಿ ದೇಶದಲ್ಲಿ ಚೆನ್ನಾಗಿ ಕಲಿತು ವಿದೇಶದಲ್ಲಿ ಸೇವೆ ಸಲ್ಲಿಸುವವರ ಸಂಖ್ಯೆಯೇ ಹೆಚ್ಚಾಗಿದೆ. ಆದರೆ, ಗಾಂಧೀಜಿಯವರು ವಿದೇಶದಲ್ಲಿ ಚೆನ್ನಾಗಿ ಕಲಿತು ದೇಶಕ್ಕಾಗಿ ಸೇವೆ ಸಲ್ಲಿಸಿದ್ದಾರೆ. ಇದು ನಮಗೂ ಹಾಗೂ ಗಾಂಧೀಜಿಯವರಿಗೆ ಇರುವ ವ್ಯತ್ಯಾಸ ತಿಳಿಸುತ್ತದೆ ಎಂದರು.

ಎಲ್ಲಿಡೆ ಭ್ರಷ್ಟಾಚಾರ: ದೇಶವನ್ನು ಬ್ರಿಟಿಷರಿಂದ ಬಂಧನ ಮುಕ್ತಗೊಳಿಸಿದ ಕೀರ್ತಿ ಗಾಂಧೀಜಿಯವರಿಗೆ ಸಲ್ಲುತ್ತದೆ. ಆದರೆ, ಇಂದಿನ ದಿನಗಳಲ್ಲಿ ಮನೆ, ಮಕ್ಕಳಿಗಾಗಿ ದೇಶವನ್ನೇ ಹರಾಜಿಗೆ ಇಡುವವರೇ ಹೆಚ್ಚಾಗಿದ್ದಾರೆ. ದೇಶದಲ್ಲಿ ಎಲ್ಲಿ ಹೋದರೂ ಭ್ರಷ್ಟಾಚಾರ ಹಾಸುಹೊಕ್ಕಿದೆ. ಇದು ಮಠಾಧೀಶರನ್ನೂ ಬಿಟ್ಟಿಲ್ಲ. ಮಠಾಧೀಶರಿಗೆ ಭಕ್ತಾಧಿಗಳು ಕಾಣಿಕೆ ನೀಡುತ್ತಾರೆ. ನಮಗೆ ಅವರು ಕೊಡಲಿ ಎಂದು ಹೇಳುವ ವ್ಯವಸ್ಥೆಗೆ ದೇಶ ಬಂದು ನಿಂತಿದೆ ಎಂದು ಶ್ರೀಗಳು ವಿಷಾದಿಸಿದರು.

ಹುಕ್ಕೇರಿಮಠದ ಸದಾಶಿವ ಸ್ವಾಮೀಜಿ ಮಾತನಾಡಿ, ಇಂದಿನ ಯುವ ಜನಾಂಗದಲ್ಲಿ ಆತ್ಮ ಕಾಳಜಿ ಜೊತೆಗೆ ದೇಶ ಕಾಳಜಿ ಕಡಿಮೆಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಗಾಂಧೀಜಿಯವರ ಆದರ್ಶಗಳನ್ನು ವಿದ್ಯಾರ್ಥಿಗಳಿಗೆ ಮುಟ್ಟಿಸುವ ಸಲುವಾಗಿ ಈ ಕಾರ್ಯಕ್ರಮದ ಮೂಲಕ ಜಿಲ್ಲೆಯ 50 ಶಾಲಾ–ಕಾಲೇಜುಗಳಲ್ಲಿ ಉಪನ್ಯಾಸ ಕೊಡಿಸುವ ಸಂಕಲ್ಪ ಮಾಡಲಾಗಿದೆ ಎಂದರು.

ಮಹಾತ್ಮಾ ಗಾಂಧೀಜಿಯವರಿಗೂ ಹಾವೇರಿಗೂ ಅವಿನಾಭಾವ ಸಂಬಂಧವಿದೆ. ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಗಾಂಧೀಜಿಯವರೊಂದಿಗೆ ಜಿಲ್ಲೆಯ ಮೈಲಾರ ಮಹದೇವಪ್ಪನವರು ಪಾಲ್ಗೊಂಡಿದ್ದು ನಾವು ಹೆಮ್ಮೆ ಪಡುವಂಥ ವಿಷಯವಾಗಿದೆ. ಸ್ವಾತಂತ್ರ್ಯ ಹೋರಾಟಕ್ಕಾಗಿ ಜಿಲ್ಲೆಯವರಾದ ತಿರಕಪ್ಪ ಮಡಿವಾಳರ, ವೀರಯ್ಯ ಹಿರೇಮಠ ಬಲಿದಾನ ಸ್ಮರಣೀಯ. ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣ ತ್ಯಾಗ ಮಾಡಿದರ ಬಗ್ಗೆ ಇತಿಹಾಸ ಓದಿ ತಿಳಿದುಕೊಳ್ಳಬೇಕು ಎಂದರು.

ಕಾರ್ಯಕ್ರಮ ಉದ್ಘಾಟಿಸಿದ ಜಿಲ್ಲಾಧಿಕಾರಿ ಕೃಷ್ಣ ಭಾಜಪೇಯಿ, ಮಹಾತ್ಮಾ ಗಾಂಧೀಜಿಯವರ ವ್ಯಕ್ತಿತ್ವ, ಚಿಂತನೆಗಳು ಮಾದರಿಯಾಗಿವೆ. ವ್ಯಾಪಾರಿಗಳು ಲಾಭದ ಗುರಿ ಹೊಂದಿದ್ದರೆ, ಮಠಾಧೀಶರು ಸಮಾಜ ಪರಿವರ್ತಿಸುವ ಗುರಿ ಹೊಂದಿರುತ್ತಾರೆ. ಅದೇ ರೀತಿ ಗಾಂಧೀಜಿಯವರು ದೇಶಕ್ಕಾಗಿ ಸ್ವಾತಂತ್ರ್ಯ ತಂದುಕೊಡುವ ಗುರಿ ಹೊಂದಿದ್ದರು. ಈ ಗುರಿಯನ್ನು ಅವರು ಸತ್ಯ ಹಾಗೂ ಅಹಿಂಸೆ ಹೋರಾಟದ ಮೂಲಕ ಸಾಧಿಸಿದ್ದಾರೆ. ತಪ್ಪುದಾರಿಯಲ್ಲಿ ನಡೆದರೆ ಸಾಧನೆ ಹಾಗೂ ಗುರಿ ಮುಟ್ಟಲು ಸಾಧ್ಯವಿಲ್ಲ ಎಂಬುದನ್ನು ಪ್ರಪಂಚಕ್ಕೆ ತಿಳಿಸಿದ್ದಾರೆ ಎಂದರು.

ಸ್ವಾತಂತ್ರ್ಯ ಹೋರಾಟಗಾರ್ತಿ ಚೆನ್ನಮ್ಮ ಹಳ್ಳಿಕೇರಿ ಮಾತನಾಡಿ, ಗಾಂಧೀಜಿಯವರ 150ನೇ ಜಯಂತಿಯನ್ನು ವಿಶೇಷವಾಗಿ ಆಚರಿಸಲು ಸಂಕಲ್ಪ ಹೊಂದಲಾಗಿದ್ದು ರಾಜ್ಯಾದ್ಯಂತ 150 ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಮಹಾತ್ಮರ ಆದರ್ಶಗಳನ್ನು ತಿಳಿಸುವ ಕಾರ್ಯ ಆಯೋಜಿಸಲಾಗಿದೆ. ಜಿಲ್ಲೆಯಲ್ಲಿ 50 ಕಾರ್ಯಕ್ರಮ ನಡೆಸಿಕೊಡುವಂತೆ ದಿಂಗಾಲೇಶ್ವರ ಸ್ವಾಮೀಜಿ ಹಾಗೂ ಸದಾಶಿವ ಸ್ವಾಮೀಜಿಗಳ ಬಳಿ ಕೇಳಿಕೊಂಡಾಗ ಸಕಾರಾತ್ಮಕವಾಗಿ ಸ್ಪಂದಿಸಿ ಕಾರ್ಯಕ್ರಮ ಆಯೋಜಿಸಿದ್ದಾರೆ. ವಿದ್ಯಾರ್ಥಿಗಳು ಈ ಕಾರ್ಯಕ್ರಮ ಸದುಪಯೋಗ ಪಡೆದು ಗಾಂಧೀಜಿಯವರ ವಿಚಾರಧಾರೆಗಳನ್ನು ಹಂಚಿಕೊಳ್ಳಬೇಕು ಎಂದರು.

ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದ ಬೆಂಗಳೂರು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಉಡುಪಿ ಕೃಷ್ಣ, ಮಾಜಿ ಸಂಸದ ಎಚ್.ಹನುಮಂತಪ್ಪ ಮಾತನಾಡಿದರು. ಇದೇ ಸಂದರ್ಭದಲ್ಲಿ ಐದು ಕಾಲೇಜುಗಳಿಗೆ ಸಾಂಕೇತಿಕವಾಗಿ ಗಾಂಧೀಜಿಯವರ ಕುರಿತ ಕಿರು ಪುಸ್ತಕಗಳನ್ನು ವಿತರಿಸಲಾಯಿತು.

ಕಾರ್ಯಕ್ರಮದಲ್ಲಿ ಅಕ್ಕಿಆಲೂರು ವಿರಕ್ತಮಠದ ಶಿವಬಸವ ಸ್ವಾಮೀಜಿ, ಕೂಡಲ ಗುರುನಂಜೇಶ್ವರಮಠದ ಗುರುಮಹೇಶ್ವರ ಶಿವಾಚಾರ್ಯರು, ಸೇಡಂನ ತೋಂಟದಾರ್ಯಮಠದ ಸದಾಶಿವ ಶ್ರೀ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಉಪಾಧ್ಯಕ್ಷ ಶಿವಪ್ಪನಗೌಡ್ರ, ಪದವಿಪೂರ್ವ ಶಿಕ್ಷಣ ಇಲಾಖೆ ಉಪನಿರ್ದೇಶಕ ಎಸ್.ಸಿ. ಪೀರಜಾದೆ ಇತರರು ಇದ್ದರು.

ಸಾಹಿತಿ ಸತೀಶ ಕುಲಕರ್ಣಿ ಪ್ರಾಸ್ತಾವಿಕ ಮಾತನಾಡಿದರು. ಬಿ. ಬಸವರಾಜ ಸ್ವಾಗತಿಸಿದರು. ನಾಗರಾಜ ನಡುವಿನಮಠ ನಿರೂಪಿಸಿದರು.



ಹಾವೇರಿ: ಮಹಾತ್ಮರ ಸಂದೇಶಗಳನ್ನು ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ತಲುಪಿಸುವ ಅಭಿಯಾನವನ್ನು ಜಿಲ್ಲಾಧಿಕಾರಿ ಕೃಷ್ಣ ಭಾಜಪೇಯಿ ಉದ್ಘಾಟಿಸಿದರು.

ಈ ಸಂಜೆ

ಶುಕ್ರವಾರ,05-07-2019



ನೃತ್ಯ ಕಲಾವಿದೆ-ಗುರು ರಾಧಿಕಾಸ್ವಾಮಿ ನೇತೃತ್ವದ ನೃತ್ಯೋಮಾ ಅಕಾಡೆಮಿ ಆಫ್ ಪರ್ಫಾರ್ಮಿಂಗ್ ಆರ್ಟ್ಸ್ ಸಂಸ್ಥೆ ವತಿಯಿಂದ ಕು. ಕೃಷಿತಾ ಮತ್ತು ಕು. ಶ್ರಾವಣಿಯವರ ರಂಗಾಭಿವಂದನೆಯ ಕಾರ್ಯಕ್ರಮದಲ್ಲಿ ಗುರು ರಾಧಿಕಾಸ್ವಾಮಿ ಅವರನ್ನು ಕಲಾವಿದೆಯರ ತಾಯಂದಿರಾದ ನೀತಿ ಗಣೇಶನ್ ಮತ್ತು ಪ್ರಭಾವತಿ ಜಗನ್ನಾಥ್ ಸನ್ಮಾನಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣಾ, ಅರ್ಚನಾ ಪುಣ್ಯೇಶ್, ಕಾರ್ತಿಕ್ ಗಣೇಶ್ ಮತ್ತು ಲೇಖಕಿ ವೈ.ಕೆ. ಸಂಧ್ಯಾ ಶರ್ಮ ಮತ್ತಿತರರಿದ್ದರು.

ವೇದಮೂರ್ತಿ ಪತ್ರಿಕೆ
ಜುಲೈ 18-24, 2019

# ಇತಿಹಾಸವನ್ನು ಅರಿಯದೇ ಇತಿಹಾಸ ನಿರ್ಮಿಸಲು ಸಾಧ್ಯವಿಲ್ಲ: ನಾಡೋಜ ಡಾ.ಮಹೇಶ್ ಜೋಶಿ



# ಇತಿಹಾಸವನ್ನು ಅರಿಯದೇ ಇತಿಹಾಸ ನಿರ್ಮಿಸಲು ಸಾಧ್ಯವಿಲ್ಲ: ನಾಡೋಜ ಡಾ.ಮಹೇಶ್ ಜೋಷಿ

ಇತಿಹಾಸವನ್ನು ಸಂಪೂರ್ಣವಾಗಿ ಅರಿಯದೇ ಇತಿಹಾಸ ನಿರ್ಮಿಸಲು ಸಾಧ್ಯವಿಲ್ಲವೆಂದು ದೂರದರ್ಶನ ಮಾಜಿ ಸಹ ಮಹಾ ನಿರ್ದೇಶಕ ನಾಡೋಜ ಡಾ.ಮಹೇಶ್ ಜೋಷಿ ವಿದ್ಯಾರ್ಥಿಗಳಿಗೆ ತಿಳಿಸಿದರು.

ಅವರು ಕೆಂಗೇರಿ ಉಪನಗರದ ಶೇಷಾದ್ರಿಪುರಮ್ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್‌ನ ಸಭಾಂಗಣದಲ್ಲಿ ಅಯೋಜಿಸಿದ್ದ ಪರಿಚಯ ಕಾರ್ಯಕ್ರಮದಲ್ಲಿ ಶೇ.85ಕ್ಕೂ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಮೆರಿಟ್ ಸ್ಕಾಲರ್‌ಶಿಪ್ ವಿತರಿಸಿ ಮಾತನಾಡಿ ಸರ್ ಎಂ.ವಿಶ್ವೇಶ್ವರಯ್ಯ ಅವರನ್ನು ಬೆಂಗಳೂರಿಗರು ಎಂದು ಮರೆಯಬಾರದು ಅವರಿಂದಾಗಿ ನಾವು ಇಂದು ಕಾವೇರಿ ನೀರನ್ನು ಕುಡಿಯುತ್ತಿದ್ದೇವೆ ಎಂದರು. ನೀವು ಏನಾದರು ಹಾಗಿ ಆದರೆ ಈ ನಾಡಿನ ಸತ್‌ಪ್ರಜೆಯಾಗಬೇಕು. ಸಮಾಜ ನಮಗೆ ಎಲ್ಲವನ್ನು ನೀಡಿದೆ ಆದರೆ ಸಮಾಜಕ್ಕೆ ನಾವು ಏನು ಕೊಟ್ಟಿದ್ದೇವೆ ಎಂಬುದು ಮುಖ್ಯ. ಅದರ ಜತೆಗೆ ಉತ್ತಮ ಮಾನವರಾಗಿ ಎಂದರು.

ನಾವು ಹುಟ್ಟಿದಾಗ ಉಸಿರು ತೆಗೆದುಕೊಂಡು ಬಂದರೆ ಹೋಗುವಾಗ ಹೆಸರು ತೆಗೆದುಕೊಂಡು ಹೋಗಬೇಕು ಅದು ನಮ್ಮ ಪರಿಚಯ ಆ ಕಾರ್ಯವನ್ನು ಗುರು ನಮಗೆ ಕಲಿಸುತ್ತಾರೆ ಎಂದರು. ಸೋಲೆ ನಮ್ಮ ಗೆಲುವಿನ ಮೆಟ್ಟಿಲು ನಮ್ಮ ಜೀವನವನ್ನು ನಾವೇ ರೂಪಿಸಿಕೊಳ್ಳಬೇಕು ಜೀವನ ಎಂಬ ವಿಶ್ವವಿದ್ಯಾಲಯದಲ್ಲಿ ಪದವಿಯನ್ನು ಪಡೆಯಬೇಕು. ಪ್ರತಿಯೊಬ್ಬರಲ್ಲೂ




ಜ್ಞಾನವೆಂಬುದು ಇದೆ ಅದನ್ನು ಹೆಕ್ಕಿ ತೆಗೆಯುವ ಕಾರ್ಯವನ್ನು ಈ ಪರಿಚಯ ಮಾಡುವುದು ಎಂದರು.

ಸಮಾರಂಭದ ಮುಖ್ಯ ಅತಿಥಿ ಎಸ್‌ಇಟಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೆ.ಪಿ.ಕೃಷ್ಣ ಮಾತನಾಡಿ, ರಾಜ್ಯದಲ್ಲಿಯೆ ಅತ್ಯುತ್ತಮ ಶಿಕ್ಷಣ ಸಂಸ್ಥೆಗಳಲ್ಲಿ ನಮ್ಮ ಶಿಕ್ಷಣ ಸಂಸ್ಥೆಯು ಒಂದು. ಈ ವರ್ಷ ನಾವು ಒಂದೂವರೆ ಕೋಟಿಗೂ ಹೆಚ್ಚು ಸ್ಕಾಲರ್‌ಶಿಫ್‌ನ್ನು ವಿತರಿಸಿದ ಹೆಗ್ಗಳಿಕೆ ನಮ್ಮದು 13 ಸಾವಿರ ವಿದ್ಯಾರ್ಥಿಗಳು ಪದವಿಯನ್ನು ಕಲಿಯುತ್ತಿದ್ದಾರೆ. ಸಮಜಕ್ಕೆ ಉಪಯುಕ್ತರಾಗುವಂತ ನಾಗರೀಕರನ್ನು ತಯಾರಿಸುವ ಕಾರ್ಯವನ್ನು ಮಾಡುತ್ತಿದೆ.

ಮಹಾತ್ಮಗಾಂಧಿಯಾಗಲಿ, ಜಯಪ್ರಕಾಶ್ ನಾರಾಯಣರಾಗಲಿ ಮತ್ತು ಆಚಾರ್ಯ ವಿನೋಬಾಬಾವೆಯವರಾಗಲಿ ಅವರು ಯಾರು ಪಂಚಾಯತಿ ಸದಸ್ಯರು ಸಹ ಆಗಿರಲಿಲ್ಲ, ಆದರೂ ಅವರ ಕೊಡುಗೆ ದೇಶಕ್ಕೆ ಅನನ್ಯವಾದದು ಅದನ್ನು ನಾವು ಎಂದಿಗೂ ಮರೆಯಲು ಸಾಧ್ಯವಿಲ್ಲ ಎಂದರು.

ಎಲ್ಲ ತರಹದ ದಾಸ್ಯತ್ವವನ್ನು ದೂರವಿಡುವ ಶಿಕ್ಷಣವನ್ನು ನಾವು ಇಂದು ನೀಡುತ್ತಿದ್ದೇವೆ. ಇದು ಮಹಾತ್ಮ ಗಾಂದಿಯವರ ಕನಸು ಸಹ ಆಗಿತ್ತು. ಆತ್ಮಶ್ರದ್ಧೆ, ಆತ್ಮಸ್ಥೈರ್ಯವನ್ನು ನಾವು ವಿದ್ಯಾರ್ಥಿಗಳಲ್ಲಿ ತುಂಬುವ ಕಾರ್ಯವನ್ನು ಶಿಕ್ಷಕರು ಮಾಡಬೇಕು ಎಂದರು.

ಸಮಾರಂಭ ಅಧ್ಯಕ್ಷತೆಯನ್ನು ಎಸ್‌ಇಟಿಯ ಅಧ್ಯಕ್ಷ ಪಂಡಿತಾರಾಧ್ಯ ವಹಿಸಿ ಮಾತನಾಡಿ ಪ್ರಾಮಾಣಿಕತೆ, ಧೈರ್ಯದಿಂದ ವಿದ್ಯಾರ್ಥಿಗಳು ನಡೆದುಕೊಂಡು ಯಶಸ್ಸನ್ನು ಸಾಧಿಸಿರಿ ಎಂದರು.

ಸಮಾರಂಭದಲ್ಲಿ ಧರ್ಮದರ್ಶಿ ನಟರಾಜ್, ಗೌರ್ವನಿಂಗ್ ಕೌನ್ಸಿಲ್ ಚೇರ್‌ಮನ್ ಬಿ.ಎ.ಅನಂತರಾಮ್, ಪಿಯುಸಿ ಕಾಲೇಜು ಪ್ರಾಂಶುಪಾಲ ಮಂಜುನಾಥ, ಪ್ರಾಧ್ಯಾಪಕರಾದ ಪ್ರೊ.ರೂಪಶ್ರೀ, ಪ್ರೊ.ಸೌಮ್ಯ, ಪ್ರೊ.ಚೇತನಾ, ಪ್ರೊ.ಮಂಜುಳಾ, ಪ್ರೊ.ರೂಪ ಸೇರಿದಂತೆ ಪ್ರಾಧ್ಯಾಪಕರು, ವಿದ್ಯಾರ್ಥಿಗಳು ಹಾಗು ಪೋಷಕರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಪ್ರಜಾಪ್ರಗತಿ

# ವಿದ್ಯಾರ್ಥಿಗಳು ಶಿಸ್ತು, ಶ್ರದ್ಧೆ ರೂಢಿಸಿಕೊಳ್ಳಿ

ತುಮಕೂರು

ವಿದ್ಯಾರ್ಥಿಗಳು ದೇಶದ ಸಂಪತ್ತಾಗಬೇಕು. ಅವರಲ್ಲಿ ನಿಯತ್ತು ಮತ್ತು ಶ್ರದ್ಧೆ ಬಹು ಮುಖ್ಯವಾಗಿರಬೇಕು. ಮಕ್ಕಳು ದೇಶವನ್ನು ಪ್ರೀತಿಸುವ, ಸಂಸ್ಕೃತಿಯನ್ನು ಗೌರವಿಸುವ ಗುಣಬೆಳೆಸಿಕೊಳ್ಳಬೇಕು ಎಂದು ಪಾವಗಡದ ಶ್ರೀ ರಾಮಕೃಷ್ಣ ಸೇವಾಶ್ರಮದ ಅಧ್ಯಕ್ಷ ಸ್ವಾಮಿ ಜಪಾನಂದಜೀ ಅಭಿಪ್ರಾಯಪಟ್ಟರು.

ನಗರದ ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ ಪ್ರಥಮ ಪಿ.ಯು.ಸಿ. ತರಗತಿಗಳ ಉದ್ಘಾಟನೆ ಹಾಗೂ ಎಸ್.ಇ.ಟಿ. ಮೆರಿಟ್ ಸ್ಕಾಲರ್‌ಶಿಪ್ ಪ್ರದಾನ ಮಾಡಿ ಮಾತನಾಡಿದ ಅವರು, ದೇಶದ ಅಭಿವೃದ್ಧಿಯಲ್ಲಿ ವಿದ್ಯಾರ್ಥಿ ಸಮೂಹದ ಅವಶ್ಯಕತೆಯನ್ನು ಕುರಿತು ವಿವರಿಸಿದರು.



ಶಿಕ್ಷಣ ಮಕ್ಕಳಲ್ಲಿ ಹೃದಯವೈಶಾಲ್ಯತೆಯನ್ನು ಬೆಳೆಸಬೇಕು ಎಂದರು. ಸ್ವಾಮಿ ವಿವೇಕಾನಂದ, ಸರ್ ಸಿ.ವಿ. ರಾಮನ್ ಹಾಗೂ ಅಬ್ದುಲ್ ಕಲಾಂರವರ ಬಾಲ್ಯ ಹಾಗೂ ಜೀವನಗಳು ನಮಗೆ ಪ್ರೇರಣಾದಾಯಿಯಾಗಿವೆ ಎಂದು ಅಭಿಪ್ರಾಯಪಟ್ಟರು.

ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ ಕೃಷ್ಣರವರು, ವಿದ್ಯಾರ್ಥಿಗಳನ್ನು ಶೇಷಾದ್ರಿಪುರಂ ಕುಟುಂಬಕ್ಕೆ ಬರಮಾಡಿಕೊಂಡು, ಸಂಸ್ಥೆ ನಡೆದು ಬಂದ ದಾರಿ ಹಾಗೂ ವಿದ್ಯಾರ್ಥಿಗಳಿಗೆ ಸಂಸ್ಥೆಯಿಂದ ನೀಡುವ ಸೌಲಭ್ಯಗಳನ್ನು ಕುರಿತು ವಿವರಿಸಿದರು. ವಿದ್ಯಾರ್ಥಿಗಳು ಪ್ರಜ್ಞಾವಂತರಾಗಬೇಕು, ಸಮಾಜದ ಅಭಿವೃದ್ಧಿಯಲ್ಲಿ ಅವರ ಪಾತ್ರ ಬಹುಮುಖ್ಯವಾದದ್ದು ಎಂದು ತಿಳಿಸಿದರು. ನೀವು ಮಾಡುವ ಕೆಲಸದಿಂದ ನೀವು ಸಮಾಜದಲ್ಲಿ ಗುರುತಿಸಿಕೊಳ್ಳಬೇಕು. ಸೇವಾ ಮನೋಭಾವ ಮತ್ತು ತ್ಯಾಗಜೀವನ ಸಾರ್ಥಕತೆಗೆ ಬಹುಮುಖ್ಯ ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಸಮಾರಂಭದಲ್ಲಿ ಹತ್ತನೇ ತರಗತಿಯಲ್ಲಿ ಶೇ.85 ಕ್ಕಿಂತ ಅಧಿಕ ಅಂಕಗಳನ್ನು ಗಳಿಸಿರುವ ಕಾಲೇಜಿನ 150 ವಿದ್ಯಾರ್ಥಿಗಳಿಗೆ ಪ್ರಮಾಣ ಪತ್ರ ಹಾಗೂ ತಲಾ 10,000 ರೂ.ಗಳ ಚೆಕ್ ವಿತರಿಸಲಾಯಿತು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷರಾದ ಎನ್.ಆರ್. ಪಂಡಿತಾರಾಧ್ಯ, ಉಪಾಧ್ಯಕ್ಷರಾದ ಟಿ.ಎಸ್. ಹೆಂಜಾರಪ್ಪ, ಸಹ ಕಾರ್ಯದರ್ಶಿ ಎಂ.ಎಸ್. ನಟರಾಜು ಹಾಗೂ ಧರ್ಮದರ್ಶಿಗಳಾದ ಮುದ್ದುಕೃಷ್ಣ, ಡಬ್ಲ್ಯೂ.ಡಿ. ಅಶೋಕ್, ಪರಮಶಿವಯ್ಯ ಮತ್ತು ಬಿ.ಎ. ಅನಂತರಾಮ್, ಶೇಷಾದ್ರಿಪುರಂ ಪ.ಪೂ. ಕಾಲೇಜಿನ ಪ್ರಾಂಶುಪಾಲ ಬಿ.ವಿ. ಬಸವರಾಜು, ಪದವಿ ಕಾಲೇಜಿನ ಪ್ರಾಂಶುಪಾಲ ಜಗದೀಶ ಜಿ.ಟಿ., ಶಾಲೆಯ ಪ್ರಾಂಶುಪಾಲರಾದ ನಂದರಾಜ್, ಉಪನ್ಯಾಸಕ ವರ್ಗ, ಸಿಬ್ಬಂದಿ ವರ್ಗ, ಪೋಷಕರು ಮತ್ತು ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

> ನೀವು ಮಾಡುವ ಕೆಲಸದಿಂದ ನೀವು ಸಮಾಜದಲ್ಲಿ ಗುರುತಿಸಿಕೊಳ್ಳಬೇಕು. ಸೇವಾ ಮನೋಭಾವ ಮತ್ತು ತ್ಯಾಗಜೀವನ ಸಾರ್ಥಕತೆಗೆ ಬಹುಮುಖ್ಯ.
>
> -ಡಾ. ವೂಡೇ ಪಿ ಕೃಷ್ಣ

Edition
18 July, 2019 Page No. 10
Powered by : eReleGo.com

ಪ್ರಜಾವಾಣಿ ಮಂಗಳವಾರ • ಜುಲೈ 9, 2019

### ಬಾಲೆಹೊಸೂರಿನ ದಿಂಗಾಲೇಶ್ವರ ಸ್ವಾಮೀಜಿ ಹೇಳಿಕೆ

# ಗಾಂಧೀಜಿ ಆದರ್ಶ ಅಳವಡಿಸಿಕೊಳ್ಳಿ

ಪ್ರಜಾವಾಣಿ ವಾರ್ತೆ

ಹಾವೇರಿ: ಗಾಂಧೀಜಿ ಅವರ ಸಮರ್ಥ ನಾಯಕತ್ವ, ಲಕ್ಷಾಂತರ ಜನರ ತ್ಯಾಗ ಹಾಗೂ ಬಲಿದಾನದಿಂದ ದೇಶದ ಸ್ವಾತಂತ್ರ್ಯ ಹೋರಾಟ ಸಾಧ್ಯವಾಗಿದೆ ಎಂದು ಬಾಲೆ ಹೊಸೂರಿನ ದಿಂಗಾಲೇಶ್ವರ ಸ್ವಾಮೀಜಿ ಹೇಳಿದರು

ನಗರದ ಹುಕ್ಕೇರಿ ಮಠದಲ್ಲಿ ಸೋಮವಾರ ನಡೆದ ಗಾಂಧೀಜಿ ಅವರ 150 ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ ರಾಷ್ಟ್ರಪಿತ ಗಾಂಧಿ, ಕಸ್ತೂರಬಾ ಹಾಗೂ ವಿನೋಬಾಜಿಯವರು ಸಂದೇಶವನ್ನು ವಿದ್ಯಾರ್ಥಿಗಳಿಗೆ ತಲುಪಿಸುವ ಕಾರ್ಯಕ್ರಮದ ಸಾನ್ನಿಧ್ಯ ವಹಿಸಿ ಅವರು ಮಾತನಾಡಿದರು.

ಗಾಂಧೀಜಿ ಅವರ ಸಾಧನೆಯಿಂದ ಇಂದು ಎಲ್ಲ ಇಲಾಖೆಗಳಲ್ಲಿ ಅವರ ಭಾವಚಿತ್ರ ಇರುತ್ತದೆ, ಅವರಂತೆಯೇ ಸಾಧನೆ ಮಾಡಿ ಯುವಜನರು ಮುಂದೆ ಬರಬೇಕು. ಸ್ವದೇಶಿ ವಸ್ತುಗಳ ಬಳಕೆ, ದೇಶದ ಅಭಿವೃದ್ಧಿಗೆ ಮುಂದಾಗಬೇಕು ಎಂದರು. ದೇಶದಲ್ಲಿನ ಅನಾಚಾರ, ಭ್ರಷ್ಟಾಚಾರ, ವಂಚನೆಯನ್ನು ಹೋಗಲಾಡಿಸಲು ಯುವಕರು ಮುಂದಾಗಬೇಕು. ಗಾಂಧೀಜಿಯವರ ಆದರ್ಶ ಬೆಳೆಸಿಕೊಳ್ಳಬೇಕು ಎಂದರು.

> ಪುರುಷ ಪ್ರಧಾನ ಸಮಾಜ ಅಸ್ತಿತ್ವದಲ್ಲಿದ್ದು, ಇದನ್ನು ಬದಲಾಯಿಸಬೇಕು. ಗಾಂಧೀಜಿ ಕನಸಿನಂತೆ ಮಹಿಳೆಯರಿಗೂ ಸ್ವಾತಂತ್ರ್ಯ ಸಿಗುವಂತಾಗಬೇಕು
>
> ಊಡೇಪಿ ಕೃಷ್ಣ
> ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಊಡೇಪಿ ಕೃಷ್ಣ ಮಾತನಾಡಿ, 'ಬುದ್ಧ, ಬಸವ, ಗಾಂಧಿ ಸಮಾಜದ ಏಳಿಗೆಗೆ ದುಡಿದಿದ್ದಾರೆ. ಅಲ್ಲದೇ, ಮಹಾತ್ಮ ಗಾಂಧೀಜಿ ಅವರ ನಾಯಕತ್ವ, ಲಕ್ಷಾಂತರ ಜನರ ತ್ಯಾಗ ಬಲಿದಾನದಿಂದ ಸ್ವಾತಂತ್ರ್ಯ ಸಿಕ್ಕಿದೆ' ಎಂದರು.

ಜಿಲ್ಲಾಧಿಕಾರಿ ಕೃಷ್ಣ ಬಾಜಪೇಯಿ ಮಾತನಾಡಿ, ಇಂದಿನ ಜನರು ತಮಗೆ ಬೇಕಾದ ವಿಷಯವನ್ನು ಬಿಟ್ಟು, ಬೇರೆ ವಿಷಯಕ್ಕೆ ಹೆಚ್ಚು ಸಮಯ ವ್ಯರ್ಥ ಮಾಡುತ್ತಾರೆ. ಗಾಂಧೀಜಿ ತತ್ವಗಳಾದ ಸತ್ಯ, ಅಹಿಂಸೆ ದಾರಿಯಲ್ಲಿ ನಡೆಯಬೇಕು. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಬ್ರಿಟಿಷರು ತಪ್ಪು ಮಾಡುತ್ತಿದ್ದರು. ಅವರ ಹೃದಯ ಪರಿವರ್ತನೆಗೆ ಗಾಂಧೀಜಿ ಮುಂದಾಗುತ್ತಿದ್ದರು ಎಂದು ಹೇಳಿದರು.

ಹುಕ್ಕೇರಿಮಠದ ಸದಾಶಿವ ಸ್ವಾಮೀಜಿ, ಅಕ್ಕಿಆಲೂರು ವಿರಕ್ತ ಮಠದ ಶಿವಬಸವ ಸ್ವಾಮೀಜಿ, ಕೂಡಲ ಮಠದ ಗುರುನಂಜೇಶ್ವರ ಸ್ವಾಮೀಜಿ, ಎಚ್. ಹನುಮಂತಪ್ಪ, ಪದವಿಪೂರ್ವ ಶಿಕ್ಷಣ ಇಲಾಖೆ ಉಪನಿರ್ದೇಶಕ ಎಸ್. ಸಿ.ಪೀರಜಾದೆ, ಸತೀಶ ಕುಲಕರ್ಣಿ, ಡಿ.ಬಸವರಾಜ, ವಿ.ಎನ್.ತಿಪ್ಪನಗೌಡ್ರ ಇದ್ದರು.



ಹಾವೇರಿಯ ಹುಕ್ಕೇರಿಮಠದಲ್ಲಿ ಸೋಮವಾರ ನಡೆದ ಗಾಂಧೀಜಿ ಅವರ 150 ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ ರಾಷ್ಟ್ರಪಿತ ಗಾಂಧಿ, ಕಸ್ತೂರಬಾ ಹಾಗೂ ವಿನೋಭಾಜಿ ಅವರ ಸಂದೇಶವನ್ನು ವಿದ್ಯಾರ್ಥಿಗಳಿಗೆ ತಲುಪಿಸುವ ಕಾರ್ಯಕ್ರಮದಲ್ಲಿ ಚನ್ನಮ್ಮ ಹಳ್ಳಿಕೇರಿ ಮಾತನಾಡಿದರು

## 'ಗಾಂಧೀಜಿ ಅವಶ್ಯಕತೆ ಇನ್ನೂ ಇತ್ತು'

ಭಾರತದಲ್ಲಿ ಅಷ್ಟೇ ಅಲ್ಲದೇ ವಿದೇಶದಲ್ಲಿಯೂ ಇಂದು ಗಾಂಧೀಜಿ ಅವರ 150 ನೇ ಹುಟ್ಟುಹಬ್ಬವನ್ನು ಆಚರಿಸುತ್ತಿದ್ದಾರೆ. ಮಹಿಳೆಯರು ದೇಶವನ್ನು ಮುನ್ನಡೆಸಬೇಕು ಎಂದು ಅವರು ಹೇಳಿದ್ದರು. ದೇಶದ ಏಳಿಗೆಗೆ ಅವರ ಅವಶ್ಯಕತೆ ಇನ್ನೂ ಇತ್ತು ಎಂದು ಸ್ವಾತಂತ್ರ್ಯ ಹೋರಾಟಗಾರ್ತಿ ಚನ್ನಮ್ಮ ಹಳ್ಳಿಕೇರಿ ಹೇಳಿದರು.

## ಲಿಖಿತ ಪರೀಕ್ಷೆ 23 ಕ್ಕೆ

ಹಾವೇರಿ: ರಾಣೆಬೆನ್ನೂರು ತಾಲ್ಲೂಕಿನ ಹನುಮನಮಟ್ಟಿ ಕೃಷಿ

## ಸಾರಿಗೆ ನಿಯಂತ್ರಣಾಧಿಕಾರಿಗೆ ಸನ್ಮಾನ




## ವಿದ್ಯಾರ್ಥಿಗಳಿಂದ ಅರ್ಜಿ ಆಹ್ವಾನ

ಹಾವೇರಿ: ಸಮಾಜ ಕಲ್ಯಾಣ ಇಲಾಖೆ 2018-19ನೇ ಶೈಕ್ಷಣಿಕ ಸಾಲಿನಲ್ಲಿ ಮೆಟ್ರಿಕ್ ನಂತರದ ಕೋರ್ಸ್‌ಗಳಲ್ಲಿ ಪ್ರಥಮ ಪ್ರಯತ್ನದಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ನೀಡಲು ಉದ್ದೇಶಿಸಿದ್ದು, ಅರ್ಜಿ ಆಹ್ವಾನಿಸಿದೆ.

ದ್ವಿತೀಯ ಪಿ.ಯು.ಸಿ, ಪಾಲಿಟೆಕ್ನಿಕ್ ಡಿಪ್ಲೊಮಾ ವಾರ್ಷಿಕ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದವರಿಗೆ ₹ 20 ಸಾವಿರ, ವಿವಿಧ ಪದವಿಯಲ್ಲಿ ಉತ್ತೀರ್ಣರಾದವರಿಗೆ ₹25 ಸಾವಿರ, ಸ್ನಾತಕೋತ್ತರ ಪದವೀಧರರಿಗೆ ₹ 30 ಸಾವಿರ, ಕೃಷಿ, ಎಂಜಿನಿಯರಿಂಗ್, ವೈದ್ಯಕೀಯ, ಪಶು ವೈದ್ಯಕೀಯ, ಎಂ.ಟೆಕ್ ಸ್ನಾತಕೋತ್ತರ ಪದವೀಧರರಿಗೆ ₹35 ಸಾವಿರ ಪ್ರೋತ್ಸಾಹಧನ ಮಂಜೂರು ಮಾಡಲಾಗುತ್ತದೆ.

2018-19ನೇ ಶೈಕ್ಷಣಿಕ ಸಾಲಿನ (2019ರ ವರ್ಷದಲ್ಲಿ ಉತ್ತೀರ್ಣರಾದವರು) ಸಮಾಜ ಕಲ್ಯಾಣ ಇಲಾಖೆ ವೆಬ್‌ಸೈಟ್ www.sw.kar.nic.in ನಲ್ಲಿ ಅರ್ಜಿ ಸಲ್ಲಿಸಬೇಕು. ಭರ್ತಿ ಮಾಡಿದ ಅರ್ಜಿಯನ್ನು ಸಂಬಂಧಪಟ್ಟ ಕಾಲೇಜು ಪ್ರಾಂಶುಪಾಲರ ದೃಢೀಕರಣದೊಂದಿಗೆ ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಕೋರ್ಸ್‌ಗಳ ಅಂಕಪಟ್ಟಿ, ಜಾತಿ ಮತ್ತು ಆದಾಯ ಪ್ರಮಾಣಪತ್ರ ಪ್ರತಿಗಳು, ಆಧಾರ ಕಾರ್ಡ್ ಹಾಗೂ ಬ್ಯಾಂಕ್ ಪಾಸ್‌ಪುಸ್ತಕದ ದೃಢೀಕೃತ ಪ್ರತಿಯೊಂದಿಗೆ ಉಪನಿರ್ದೇಶಕರ ಕಾರ್ಯಾಲಯ, ಸಮಾಜ ಕಲ್ಯಾಣ ಇಲಾಖೆ, ಜಿಲ್ಲಾಡಳಿತ ಭವನ

ఈనాడు
epaper.eenadu.net

# మహిళల సాధికారతతోనే నిజమైన స్వరాజ్యం

హొసపేట, న్యూస్‌టుడే: మహిళలు సాధికారత సాధించినప్పుడే నిజమైన స్వరాజ్యం లభించినట్లవుతుందని హావేరి జిల్లాకు చెందిన స్వాతంత్ర్య సమరయోధురాలు చెన్నమ్మ హళ్లికేరి పేర్కొన్నారు. హంపీ కన్నడ విశ్వవిద్యాలయంలోని ఒనకే ఓబవ్వ అధ్యయనం పీఠం ఆధ్వర్యంలో మంగళవారం వర్సిటీ ఆవరణలో 'పూర్వం పరిపాలన చేసిన రాణులు' అనే అంశంపై ఏర్పాటు చేసిన రాష్ట్ర స్థాయి సదస్సును ఆమె ప్రారంభించి మాట్లాడారు. ఆధునిక సమాజ నిర్మాణంలో మహిళలు కీలక పాత్ర పోషించాలని పిలుపునిచ్చారు. ఆపదలో స్వీయరక్షణ ఏర్పాట్లు చేసుకోవాలని ఆచార్య వినోభాబావే ఏనాడో చెప్పారని గుర్తు చేశారు. మహిళలు సాధికారత సాధించాలని, స్వాతంత్ర్య సమరం సమయంలోనే కుటీర పరిశ్రమలను వినోభాబావే ప్రోత్సహించారని అన్నారు. పురుషాధిక్య సమాజంలో మహిళలు కూడా నాలుగు గోడల నడుమ నుంచి బయటకు వచ్చి తమ కాళ్లపై నిలబడాలని సూచించారు. మన రాష్ట్రంలో రాణిచెన్నమ్మ, ఒనకే ఓబవ్వల సాహసాన్ని ఆమె గుర్తు చేశారు. ఈ కార్యక్రమానికి ముఖ్య అతిథిగా విచ్చేసిన బెంగళూరు క్రియాశీల కార్యకర్త పూడె పి.కృష్ణ మాట్లాడుతూ పన్నెండేళ్లలోనే స్వాతంత్ర్య సంగ్రామంలో అడుగిడిన ఘనత చెన్నమ్మ హళ్లికేరికి దక్కుతుంది. 1931లో హావేరి జిల్లా హొసరిత్తిలో జన్మించిన చెన్నమ్మ హళ్లికేరి తన తల్లి నుంచి స్వేచ్ఛాపోరాటం చిన్నతనం నుంచే వంట పట్టించుకుందన్నారు. 1951లో తెలంగాణలో జరిగిన భూపోరాటంలో వినోభాబావేతో కలిసి క్రియాశీల పాత్ర పోషించారని గుర్తు చేశారు. 91 ఏళ్ల చెన్నమ్మ హళ్లికేరి ప్రస్తుతం మహారాష్ట్రలో నివాసముంటూ నేటికీ వినోభాబావే, గాంధీ మార్గాల్లో నడుస్తున్నారని గుర్తు చేశారు. ఈ కార్యక్రమానికి అధ్యక్షత వహించిన వర్సిటీ ఉపకులపతి డాక్టర్ స.చి.రమేశ్ మాట్లాడుతూ రెండు నెలల క్రితం వర్సిటీలో రూ.2 కోట్లతో ఒనకే ఓబవ్వ అధ్యయన పీఠాన్ని ఆరంభించాం. రాబోయే రోజుల్లో మహాత్మా గాంధీ, బాబాసాహెబ్ అంబేడ్కర్ అధ్యయన పీఠాల్ని నెలకొల్పుతామన్నారు. ఈ కార్యక్రమంలో కులసచివుడు డాక్టర్ ఎ.సుబ్బణ్ణ రై, విభాగం సంచాలకురాలు శైలజా హిరేమఠ తదితరులు పాల్గొన్నారు.



కార్యక్రమాన్ని జ్యోతి వెలిగించి ప్రారంభిస్తున్న సమరయోధురాలు చెన్నమ్మ హళ్లికేరి

Date : 18/12/2019 EditionName : ANDHRA PRADESH( KARNATAKA, BALLARI ) PageNo : Page 01